# ಮೊಳಕಾಲ್ಮೂರು ತಾಲೂಕಿನ
# ಮ್ಯಾಸನಾಯಕರ ಭಾಷಿಕ ಅಧ್ಯಯನ

ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ


ಸಂಶೋಧಕರು

ಆಂಜನೇಯ





ಮಾರ್ಗದರ್ಶಕರು

ಡಾ. ಅಶೋಕ ಕುಮಾರ

ಅಧ್ಯಾಪಕರು

ಕನ್ನಡ ಭಾಷಾಭಿವೃದ್ಧಿ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬







ಭಾಷಾ ನಿಕಾಯ

ಕನ್ನಡ ಭಾಷಾಭಿವೃದ್ಧಿ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೩

# ಮೊಳಕಾಲ್ಮೂರು ತಾಲೂಕಿನ ಮ್ಯಾಸನಾಯಕರ ಭಾಷಿಕ ಅಧ್ಯಯನ

ಎಂ.ಫಿಲ್ ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ


ಸಂಶೋಧಕರು

**ಆಂಜನೇಯ**

ಮಾರ್ಗದರ್ಶಕರು

**ಡಾ. ಅಶೋಕ ಕುಮಾರ**

ಅಧ್ಯಾಪಕರು

ಕನ್ನಡ ಭಾಷಾಭಿವೃದ್ಧಿ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬








ಭಾಷಾ ನಿಕಾಯ

**ಕನ್ನಡ ಭಾಷಾಭಿವೃದ್ಧಿ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೩

# ದೃಢೀಕರಣ ಪತ್ರ

ಆಂಜನೇಯ ಇವರು 'ಮೊಳಕಾಲ್ಮೂರು ತಾಲೂಕಿನ ಮ್ಯಾಸನಾಯಕರ ಭಾಷಿಕ ಅಧ್ಯಯನ' ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಕನ್ನಡ ಭಾಷಾಭಿವೃದ್ಧಿ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ದಿನಾಂಕ :** ೩೦ ಏಪ್ರಿಲ್ ೨೦೦೩
**ಸ್ಥಳ :** ವಿದ್ಯಾರಣ್ಯ

**(ಡಾ. ಅಶೋಕ ಕುಮಾರ)**
ಮಾರ್ಗದರ್ಶಕರು
ಅಧ್ಯಾಪಕರು
ಕನ್ನಡ ಭಾಷಾಭಿವೃದ್ಧಿ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

## ಪ್ರಮಾಣ ಪತ್ರ

'**ಮೊಳಕಾಲ್ಮೂರು ತಾಲೂಕಿನ ಮ್ಯಾಸನಾಯಕರ ಭಾಷಿಕ ಅಧ್ಯಯನ**' ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಡಾ. ಅಶೋಕ ಕುಮಾರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಕನ್ನಡ ಭಾಷಾಭಿವೃದ್ಧಿ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ದಿನಾಂಕ : ೩೦ ಏಪ್ರಿಲ್ ೨೦೦೩** — **(ಆಂಜನೇಯ)**

**ಸ್ಥಳ : ವಿದ್ಯಾರಣ್ಯ** — ಸಂಶೋಧಕರು

## ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್.ಅಧ್ಯಯನ ಕೈಗೊಳ್ಳಲು ಅವಕಾಶ ಕಲ್ಪಿಸಿಕೊಟ್ಟ ಮಾನ್ಯ ಕುಲಪತಿಗಳಾದ ಡಾ. ಎಚ್.ಜೆ.ಲಕ್ಕಪ್ಪಗೌಡ ಅವರಿಗೆ, ಅಧ್ಯಯನದ ಸಂದರ್ಭದಲ್ಲಿ ಸೂಕ್ತ ಸಲಹೆಗಳನ್ನು ನೀಡಿದ ಕುಲಸಚಿವರಾದ ಡಾ. ಕೆ.ವಿ.ನಾರಾಯಣ ಅವರಿಗೆ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ.ಕರೀಗೌಡ ಬೀಚನಹಳ್ಳಿ ಅವರಿಗೆ,

ಅಧ್ಯಯನದ ಪ್ರತಿಹಂತದಲ್ಲಿ ಗ್ರಹಿಕೆಯ ನೆಲೆಗಳನ್ನು ತಿದ್ದಿ ಸಮಸ್ಯೆಗಳಿಗೆ ಪರಿಹಾರವನ್ನು ನೀಡುತ್ತಾ ತಾಳ್ಮೆಯಿಂದ ಮಾರ್ಗದರ್ಶನ ಮಾಡಿದ ಪ್ರೀತಿಯ ಗುರುಗಳಾದ ಡಾ. ಅಶೋಕ ಕುಮಾರ ಅವರಿಗೆ,

ಅಧ್ಯಯನದ ಅವಧಿಯಲ್ಲಿ ಪೂರಕ ಸಲಹೆ ಸಹಕಾರವನ್ನು ನೀಡಿದ ಕನ್ನಡ ಭಾಷಾಭಿವೃದ್ಧಿ ವಿಭಾಗದ ಮುಖ್ಯಸ್ಥರಾದ ಡಾ. ಡಿ.ಪಾಂಡುರಂಗಬಾಬು ಅವರಿಗೆ, ಅಧ್ಯಯನದ ಸಂದರ್ಭದಲ್ಲಿ ಸಂಶೋಧನೆಯ ವಿವಿಧ ಮಜಲುಗಳನ್ನು ಬೋಧಿಸಿದ ಅಧ್ಯಾಪಕರಾದ ಡಾ.ಸಾಂಬಮೂರ್ತಿ, ಡಾ. ಪಿ.ಮಹಾದೇವಯ್ಯ ಅವರಿಗೆ ಹಾಗೂ ಸಹಕರಿಸಿದ ಡಾ. ವಿರೂಪಾಕ್ಷಿ ಪೂಜಾರಹಳ್ಳಿ, ಡಾ. ಎಸ್.ಎಸ್.ಅಂಗಡಿ, ಡಾ. ಕೆ.ರವೀಂದ್ರನಾಥ ಅವರಿಗೆ,

ಪೂಜ್ಯ ಗುರುಗಳಾದ ಡಾ.ಮೃತ್ಯುಂಜಯ ಹೊರಕೇರಿ, ಡಾ.ಶಾಂತಿನಾಥ ದಿಬ್ಬದ, ಡಾ.ಮಲ್ಲಿಕಾಘಂಟಿ ಹಾಗೂ ಕರಿಯಪ್ಪ ಮಾಳಿಗೆ, ಮಾನಕರಿ ಶ್ರೀನಿವಾಸ ಆಚಾರಿ, ರವೀಂದ್ರ ಕೂಡಿಮಗ್ಗಿ ಅವರಿಗೆ,

ಅಧ್ಯಯನದ ಎಲ್ಲಾ ಸಂದರ್ಭದಲ್ಲಿ ಸಹಕರಿಸಿದ ಹಿರಿಯ ಸಂಶೋಧಕ ಮಿತ್ರರಾದ ಸಣ್ಣಪಾಪಯ್ಯ ದೇವರಹಟ್ಟಿ, ಜಾಜಿ ದೇವೇಂದ್ರಪ್ಪ, ಬಿ.ಓಂಪ್ರಕಾಶ್ ನಾಯಕ, ದೇವರಾಜ ಅವರಿಗೆ, ಒಂದೆಡೆ ನೆಲೆನಿಂತು ವಿಚಾರ ವಿನಿಮಯಗಳನ್ನು ಮಾಡುತ್ತಾ ಸಹಕರಿಸಿದ ಮಿತ್ರರಾದ ಅಂಜಿನಪ್ಪ ದನಕಾವರ್, ಕೆ.ಪಿ. ನಾಗೇಂದ್ರಸ್ವಾಮಿ, ಮಹಾಬಲೇಶ್ವರ ಅವರಿಗೆ,

ಮಿತ್ರರಾದ ಜೆ. ರವೀಂದ್ರಕುಮಾರ, ಪಿ. ಕೃಷ್ಣಮೂರ್ತಿ, ಜಿ. ವೆಂಕಟರಮಣ, ಚಂದ್ರಪ್ಪ, ಶಿವು, ಪಿ. ನೇತ್ರಾವತಿ ಅವರಿಗೆ, ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಮಿತ್ರರಾದ ಜಿ.ಪಿ. ಭೀಮಣ್ಣಯಾದವ್, ಪಿ.ಉಮಾಶಂಕರ್, ಡಿ.ಎಸ್. ತಿಪ್ಪೇಸ್ವಾಮಿ, ಜಿ.ವಿ.ಸಿದ್ದಪ್ಪ ಹಾಗೂ ಸಿ.ಬಿ.ಪಲ್ಲವಿ, ಕಲ್ಯಾಣಿ ಅವರಿಗೆ,

ನನ್ನ ಅಧ್ಯಯನದ ಏಳಿಗೆಯನ್ನು ಸದಾ ಬಯಸುತ್ತಿರುವ ಪೂಜ್ಯ ತಾತನವರಾದ ಹನುಮಯ್ಯನವರಿಗೆ, ತಂದೆ ಮಾರಣ್ಣ ತಾಯಿ ಓಬಳಮ್ಮ ಅವರಿಗೆ, ದೊಡ್ಡಪ್ಪನವರಾದ ಹನುಮಂತಪ್ಪ, ಚಿಕ್ಕಪ್ಪಂದಿರಾದ ಗಂಗಣ್ಣ, ಬಸಯ್ಯ, ಮಲ್ಲಿಕಾರ್ಜುನಪ್ಪ, ಜವಳಯ್ಯ ಅವರಿಗೆ, ಮಾವನವರಾದ ರಾಮಚಂದ್ರಪ್ಪ ಅವರಿಗೆ, ಅತ್ತೆ ಚಿಕ್ಕಮ್ಮಂದಿರಿಗೂ, ತಂಗಿ ತಮ್ಮಂದಿರಿಗೆ ಹಾಗೂ ನನ್ನೂರಿನ ಸಮಸ್ತ ಬಂಧು ಬಳಗದವರಿಗೆ,

ಅಧ್ಯಯನದುದ್ದಕ್ಕೂ ಸದಾ ವಿಚಾರಿಸುತ್ತಾ ಜಾಗೃತನನ್ನಾಗಿ ಮಾಡಿದ ಪ್ರಸಾರಾಂಗದ ಸಿಬ್ಬಂದಿಯವರಾದ ಬಿ.ಗುರುಬಸಪ್ಪನವರಿಗೆ ಹಾಗೂ ಗ್ರಂಥಾಲಯದ ಸಿಬ್ಬಂದಿಯವರಾದ ಮಲ್ಲಿಕಾರ್ಜುನಪ್ಪ, ನೆರೆಗಲ್ಲಪ್ಪ ಅವರಿಗೆ, ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಎಲ್ಲಾ ವಕ್ತೃಗಳಿಗೂ ಮತ್ತು ಕನ್ನಡ ಭಾಷಾಭಿವೃದ್ಧಿ ವಿಭಾಗದ ಬೋಧಕೇತರ ಸಿಬ್ಬಂದಿಯವರಾದ ಬಿ.ವೆಂಕಟೇಶ, ಬಿ.ವಿ.ನಾಗರಾಜ ಅವರಿಗೆ,

ಸಕಾಲದಲ್ಲಿ ಅಂದವಾಗಿ ಅಕ್ಷರ ಸಂಯೋಜನೆ ಮಾಡಿಕೊಟ್ಟಂತಹ ಸೋಮನಾಥ ಕುಡಿತಿನಿಯವರಿಗೆ ಹಾಗೂ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕಾರ ನೀಡಿದವರೆಲ್ಲರಿಗೂ

ತುಂಬುಹೃದಯದ ಕೃತಜ್ಞತೆಗಳು

ಆಂಜನೇಯ

## ಕ್ಷೇತ್ರಕಾರ್ಯ ಮಾಡಿದ ಮೊಳಕಾಲ್ಮೂರು ತಾಲೂಕಿನ ಮ್ಯಾಸನಾಯಕರ ನೆಲೆಗಳು

ಸಂಡೂರು ತಾಲೂಕು




## ಚಿತ್ರದುರ್ಗ ಜಿಲ್ಲೆ



# ಪರಿವಿಡಿ

ಅಧ್ಯಾಯ - ೧

ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ / ೧ - ೫

ಅಧ್ಯಾಯ - ೨

ಮ್ಯಾಸನಾಯಕರ ಭೌಗೋಳಿಕ ನೆಲೆ - ಜನಾಂಗಿಕ ಹಿನ್ನಲೆ / ೬ - ೧೯

೨.೧. ಮೊಳಕಾಲ್ಮೂರು ತಾಲೂಕಿನ ಸಂಕ್ಷಿಪ್ತ ಪರಿಚಯ

೧. ಭೌಗೋಳಿಕ ಪರಿಸರ

೨. ಚಾರಿತ್ರಿಕ ಹಿನ್ನಲೆ

೩. ಜನಾಂಗಿಕ ಹಿನ್ನಲೆ

೪. ಭಾಷಿಕ ಪರಿಸರ

ಅಧ್ಯಾಯ - ೩

ಮ್ಯಾಸನಾಯಕರ ಭಾಷೆ / ೨೦ - ೪೪

೧. ಪ್ರವೇಶ

೨. ಕೌಟುಂಬಿಕ ವಲಯ

ಅ. ಸಂಬಂಧವಾಚಕಗಳು

೧. ರಕ್ತಸಂಬಂಧದ ಸಂಬಂಧ ವಾಚಕಗಳು

೨. ವೈವಾಹಿಕ ಸಂಬಂಧದ ಅಥವಾ ಇತರೆ ಸಂಬಂಧದ ಸಂಬಂಧ ವಾಚಕಗಳು

೩. ಕುಟುಂಬದ ಅವಳಿ ಸಂಬಂಧಗಳು

ಆ. ಸಂಬೋಧನಾ ರೂಪಗಳು

೧. ಹಿರಿಯರು ಕಿರಿಯರಿಗೆ ಬಳಸುವ ಸಂಬೋಧನಾ ರೂಪಗಳು

೨. ಕಿರಿಯರು ಹಿರಿಯರಿಗೆ ಬಳಸುವ ಸಂಬೋಧನಾ ರೂಪಗಳು

೩. ವ್ಯಕ್ತಿನಾಮಗಳೊಂದಿಗೆ ಸಂಬೋಧಿಸುವ ಕ್ರಮ

೪. ಸ್ಥಳನಾಮಗಳೊಂದಿಗೆ ಸಂಬೋಧಿಸುವ ಕ್ರಮ

೫. ಗುಣವಿಶೇಷಣಗಳೊಂದಿಗೆ ಸಂಬೋಧಿಸುವ ಕ್ರಮ

೩. ವ್ಯವಹಾರಿಕ ವಲಯ
೧. ಶಾಲಾ ಕಾಲೇಜುಗಳಲ್ಲಿ ಭಾಷಾ ಬಳಕೆ
೨. ಮಾರುಕಟ್ಟೆಗಳಲ್ಲಿ ಭಾಷಾ ಬಳಕೆ
೩. ಸಂಬೋಧನಾ ರೂಪಗಳು

ಅಧ್ಯಾಯ - ೪
ಮ್ಯಾಸನಾಯಕರ ಕನ್ನಡ ಮತ್ತು ತೆಲುಗು ಭಾಷೆ / ೪೫ - ೮೫
೧. ಪ್ರವೇಶ
೨. ಮ್ಯಾಸನಾಯಕರ ಕೌಟುಂಬಿಕ ತೆಲುಗು ಭಾಷೆಯ ಮೇಲೆ ಕನ್ನಡದ ಪ್ರಭಾವ
೩. ಮ್ಯಾಸನಾಯಕರ ವ್ಯವಹಾರಿಕ ಕನ್ನಡ ಭಾಷೆಯ ಮೇಲೆ ತೆಲುಗಿನ ಪ್ರಭಾವ
೪. ನುಡಿಬೆರಕೆ ಮತ್ತು ನುಡಿಪಲ್ಲಟ
೫. ಭಾಷಾ ಮನೋಭಾವ ಮತ್ತು ನಡವಳಿಕೆ
೬. ಭಾಷಾ ಸಂಗೋಪನಾ ಪ್ರಕ್ರಿಯೆ

ಅಧ್ಯಾಯ - ೫
ಭಾಷಿಕ ಸಂದರ್ಭಗಳು / ೮೬ - ೯೨
೧. ಸಾಮಾಜಿಕ ಸಂದರ್ಭ
೨. ಸಾಂಸ್ಕೃತಿಕ ಸಂದರ್ಭ
೩. ಆರ್ಥಿಕ ಸಂದರ್ಭ

ಅಧ್ಯಾಯ - ೬
ಸಮಾರೋಪ / ೯೩ - ೯೬
ಅನುಬಂಧಗಳು / ೯೭ - ೧೧೫
೧. ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಪದಕೋಶ
೨. ಮ್ಯಾಸನಾಯಕರ ಬೆಡಗು ಮತ್ತು ದೇವರುಗಳು
೩. ವಕ್ತೃಗಳ ವಿವರ
೪. ಪರಾಮರ್ಶನ ಗ್ರಂಥಗಳು



# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಮನುಷ್ಯ ನಾಗರಿಕನಾಗುತ್ತಾ ಹೋದಂತೆ, ಆತನ ಚಿಂತನೆಗಳು ಬೆಳೆದವು. ಆದ್ದರಿಂದ ವಿಜ್ಞಾನ ಮತ್ತು ತಂತ್ರಜ್ಞಾನವು ಬೆಳೆದು ಮನುಷ್ಯನ ಬದುಕಿನಲ್ಲಿ ಮಹತ್ತರವಾದ ಬದಲಾವಣೆಗಳಾದವು. ಮನುಷ್ಯನ ಬೆಳವಣಿಗೆಯ ಹಂತಗಳು ಮನುಷ್ಯನನ್ನು ಸಾಮಾಜಿಕ ಸಂಘಜೀವಿಯಾಗಿ ಬದುಕುವಂತೆ ಮಾಡಿದವು. ಹೀಗೆ ಸಮಾಜದಲ್ಲಿ ಬದುಕುವ ಮನುಷ್ಯನಿಗೆ ಭಾಷೆಯೊಂದು ಸಂವಹನ ಮಾಧ್ಯಮವಾಗಿ ಮನುಷ್ಯನ ಯೋಚನೆ, ಚಿಂತನೆ ಎಲ್ಲವೂ ಭಾಷೆಯೊಂದರಿಂದ ಅಭಿವ್ಯಕ್ತವಾಗಲು ಸಾಧ್ಯವಾಯಿತು. ಹೀಗೆ ಮನುಷ್ಯ ವಿಜ್ಞಾನ ಹಾಗೂ ತಂತ್ರಜ್ಞಾನ ಯುಗದಲ್ಲಿ ತನ್ನ ಮಾತೃಭಾಷೆಯೊಂದೇ ಕಲಿತು ಒಂದೇ ರೀತಿಯಾಗಿ ಬದುಕಲಾರ, ಬಾಳಲಾರ. ತನ್ನ ಅವಶ್ಯಕತೆಗಳನ್ನು ಪೂರೈಸಲು ಅಲ್ಲಿನ ಪ್ರಾದೇಶಿಕ ಭಾಷೆಯನ್ನು ಕಲಿಯುವುದು ಅನಿವಾರ್ಯವಾಗುತ್ತದೆ. ಅಂತಹ ಸಂದರ್ಭದಲ್ಲಿ ದ್ವಿಭಾಷಿಕ ಸಮುದಾಯಗಳು ಕಾಣಿಸಿಕೊಳ್ಳುತ್ತವೆ.

ಆಧುನಿಕ ಜಗತ್ತಿನಲ್ಲಿ ತೀವ್ರಗತಿಯಲ್ಲಿ ಉಂಟಾಗಿರುವ ಜಾಗತೀಕರಣ, ಉದಾರೀಕರಣ, ಖಾಸಗೀಕರಣ ಪ್ರಕ್ರಿಯೆಗಳು ದ್ವಿಭಾಷಿಕತೆಯ ಸಂದರ್ಭಗಳನ್ನು ತೀವ್ರಗೊಳಿಸಿವೆ. ಅದೇ ರೀತಿಯಾಗಿ ವಲಸೆ ಬಂದಂತಹ ಸಮುದಾಯಗಳು ತಮ್ಮ ಮಾತೃಭಾಷೆಯೊಂದಿಗೆ ಅಲ್ಲಿನ ಪ್ರಾದೇಶಿಕ ಭಾಷೆಯನ್ನು ಅಥವಾ ಆ ಪ್ರದೇಶದಲ್ಲಿ ಬಳಸುವ ಭಾಷೆಗಳನ್ನು ಕಲಿತು ವ್ಯವಹರಿಸುವುದು ಅನಿವಾರ್ಯವಾಗುತ್ತದೆ. ಇಂತಹ ದ್ವಿಭಾಷಾ ಸಮುದಾಯಗಳಲ್ಲಿ ಯಾವ ರೀತಿ ಭಾಷೆ ಬಳಕೆಯಾಗುತ್ತದೆ ಮತ್ತು ಬದಲಾ

ವಣೆ ಪ್ರಕ್ರಿಯೆಗಳೇನು ಎಂಬ ಅಧ್ಯಯನವು ಕುತೂಹಲವನ್ನು ಮೂಡಿಸುತ್ತದೆ. ದ್ವಿಭಾಷಿಕ ಪರಿಸರಗಳ ಬಗ್ಗೆ ಅಧ್ಯಯನಗಳು ನಡೆದಿವೆ. (ಕೋಲಾರ ಜಿಲ್ಲೆ ಕನ್ನಡ-ತೆಲುಗು ದ್ವಿಭಾಷಿಕತೆಯ ಅಧ್ಯಯನ - ಕೆ.ಪಿ.ಭಟ್ಟ, ಬಳ್ಳಾರಿ ಪರಿಸರದ ಕನ್ನಡ-ತೆಲುಗು ದ್ವಿಭಾಷಿಕತೆ: ಸಮಾಜೋಭಾಷಿಕ ಅಧ್ಯಯನ, ಎಂ.ಭಾಗ್ಯಲಕ್ಷ್ಮಿ) ಆದರೆ ದ್ವಿಭಾಷಿಕ ಸಮುದಾಯಗಳನ್ನು ಕುರಿತು ಅಧ್ಯಯನ ನಡೆದಿರುವುದು ಬಹಳಷ್ಟು ಕಡಿಮೆ ಎಂದು ಹೇಳಬಹುದು. ದ್ವಿಭಾಷಿಕ ಸಮುದಾಯಗಳಲ್ಲಿ ತಮ್ಮ ಮಾತೃಭಾಷೆಯನ್ನು ಕೌಟುಂಬಿಕ ವಲಯಗಳಲ್ಲಿ ಉಳಿಸಿಕೊಂಡು, ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಕಾರಣಗಳಿಂದ ಪ್ರಾದೇಶಿಕ ಭಾಷೆಯನ್ನು ವ್ಯವಹಾರಿಕ ವಲಯಗಳಲ್ಲಿ ಬಳಸುವುದು ಕಂಡುಬರುತ್ತದೆ. ಇಂತಹ ಅಧ್ಯಯನಗಳನ್ನು ಸಾಮಾಜಿಕ ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿದರೆ ಉಪಯುಕ್ತವೆನಿಸುತ್ತದೆ.

ಮೊಳಕಾಲ್ಮೂರು ಪ್ರದೇಶದಲ್ಲಿ ನೆಲೆಗೊಂಡಿರುವ ಮ್ಯಾಸನಾಯಕ ಸಮುದಾಯದವರು ಮೂಲತ: ವಲಸೆ ಬಂದಂತಹ ಬುಡಕಟ್ಟು ಜನಾಂಗದವರಾಗಿದ್ದು, ಇವರ ಹಬ್ಬ, ಆಚರಣೆ, ಜಾತ್ರೆಗಳು, ಸಂಪ್ರದಾಯಗಳು ತುಂಬಾ ವಿಶಿಷ್ಟವಾಗಿ ಕಂಡುಬರುತ್ತವೆ. ಈ ಜನಾಂಗದವರು ತಮ್ಮ ಸಂಸ್ಕೃತಿಯೊಂದಿಗೆ ಭಾಷೆಯನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಇವರು ಆಂಧ್ರಪ್ರದೇಶದ ಶ್ರೀಶೈಲ ಪರ್ವತದಿಂದ ವಲಸೆಬರುವ ಸಮಯದಲ್ಲಿ ಸಹಜವಾಗಿಯೇ ಅಲ್ಲಿನ ಭಾಷೆಯೊಂದಿಗೆ ಬಂದು ಇಲ್ಲಿ ನೆಲೆಗೊಂಡಿರಬಹುದು. ಆದ್ದರಿಂದ ಇವರ ಮನೆಯ ಮಾತು ತೆಲುಗು. ಈ ಜನಾಂಗದ ಚರಿತ್ರೆಗೆ ಸಂಬಂಧಿಸಿದ ಎಷ್ಟೋ ದಾಖಲೆಗಳು ತೆಲುಗಿನಲ್ಲಿ ಸಿಗುತ್ತವೆ. ಆದರೆ ಕನ್ನಡ ಪ್ರಾಂತ್ಯಗಳಲ್ಲಿ ನೆಲಸಿದ ನಂತರ ದಾಖಲೆಗಳು ಕನ್ನಡದಲ್ಲಿಯೂ ಸಿಗುತ್ತವೆ. ಈ ಜನಾಂಗದ ಬೆಡಗು-ಗೋತ್ರಗಳು ಸಹ ತೆಲುಗಿನಲ್ಲಿ ಬಳಕೆಯಾಗುವುದು ಕಂಡುಬರುತ್ತವೆ. ಇಂದು ಕನ್ನಡ ಪ್ರಾಂತಗಳಲ್ಲಿ ನೆಲೆಸಿರುವ ಇವರ ತೆಲುಗು ಬಹುಪಾಲು ಕನ್ನಡ ಮಿಶ್ರವಾಗಿದ್ದು ತನ್ನದೇ ಆದ ವಿಚಿತ್ರ ಶೈಲಿಯನ್ನು ಹೊಂದಿದೆ. ಇವರ 'ತೆಲುಗನ್ನಡ' ಭಾಷಾವಿಜ್ಞಾನದ ದೃಷ್ಟಿಯಿಂದ ಕುತೂಹಲಕರವಾದ ಅಧ್ಯಯನವಾಗುತ್ತದೆ.

ಮೊಳಕಾಲ್ಮೂರು ಪ್ರದೇಶವು ಕರ್ನಾಟಕ ಏಕೀಕರಣದ ನಂತರ ಸರ್ಕಾರದ ಆಡಳಿತ್ಮಾಕ ನಿರ್ಧಾರಗಳಿಂದ ಕನ್ನಡವನ್ನು ಕಡ್ಡಾಯವಾಗಿ ಬಳಸಬೇಕೆಂಬ ಒತ್ತಡ ಉಂಟಾದುದರಿಂದ ಮ್ಯಾಸನಾಯಕರ ವ್ಯವಹಾರಿಕ ವಲಯಗಳಲ್ಲೂ ಹೆಚ್ಚಾಗಿ ಕನ್ನಡವನ್ನು ಬಳಸುವುದು ಕಂಡುಬರುತ್ತಿದೆ. ಇಂತಹ ಪ್ರದೇಶದಲ್ಲಿ ನೆಲೆಸಿದಂತಹ ಮ್ಯಾಸನಾಯಕರು ಸಹಜವಾಗಿಯೇ ದ್ವಿಭಾಷಿಕರಾಗಿರುವದರಿಂದ ಇವರ ಭಾಷೆ ಯಾವ ರೀತಿಯಲ್ಲಿ ಬಳಕೆಯಾಗುತ್ತದೆ ಮತ್ತು ಬದಲಾವಣೆ ಪ್ರಕ್ರಿಯಗಳನ್ನು ಸಾಮಾಜಿಕ ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವುದು ಪ್ರಸ್ತುತ ಪ್ರಬಂಧದ ಉದ್ದೇಶವಾಗಿದೆ. ಆದ್ದರಿಂದ 'ಮೊಳಕಾಲ್ಮೂರು ತಾಲೂಕಿನ ಮ್ಯಾಸನಾಯಕರ ಭಾಷಿಕ ಅಧ್ಯಯನ' ಎಂಬ ಶೀರ್ಷಿಕೆಯ ವಿಷಯವನ್ನು ಆಯ್ದುಕೊಂಡಿದ್ದೇನೆ.

ಮ್ಯಾಸನಾಯಕರ ಭಾಷೆಯ ಸ್ವರೂಪವನ್ನು ತಿಳಿಯಲು ಮೊಳಕಾಲ್ಮೂರು ತಾಲೂಕಿನಲ್ಲಿ ನೆಲೆಸಿರುವ ಮ್ಯಾಸನಾಯಕ ಸಮುದಾಯದವರಿಂದ ಭಾಷಿಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಚಾರಿತ್ರಿಕ ದಾಖಲೆಗಳು ಜನಸಂಖ್ಯೆ ವಿವರಗಳಿಂದ ಮತ್ತು ಆಕರಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಹಾಗೆಯೇ ಸರಕಾರದ ಗೆಜಿಟಿಯರ್ ಸಂಶೋಧನಾ ಪ್ರಬಂಧಗಳು ಮೌಖಿಕ ದಾಖಲೆಗಳನ್ನು ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಮ್ಯಾಸನಾಯಕರ ಜನಾಂಗಿಕ ಹಿನ್ನೆಲೆ ಹಾಗೂ ಮೊಳಕಾಲ್ಮೂರು ತಾಲೂಕಿನ ಸಂಕ್ಷಿಪ್ತ ಪರಿಚಯಕ್ಕೆ ಸಂಬಂಧಿಸಿ ದಂತೆ ಪ್ರಕಟವಾಗಿರುವ ಪುಸ್ತಕಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಮೊಳಕಾಲ್ಮೂರು ತಾಲೂಕು ಈ ಅಧ್ಯಯನದ ವ್ಯಾಪ್ತಿಯೂ ಹೌದು, ಮಿತಿಯೂ ಹೌದು. ಮ್ಯಾಸನಾಯಕರು ನೆಲೆಸಿರುವ ದಕ್ಷಿಣ ಮತ್ತು ಪಶ್ಚಿಮಕ್ಕೆ ಹಾಗೂ ಉತ್ತರ ಪೂರ್ವಕ್ಕೆ ಸಂಬಂಧಿಸಿದಂತೆ ಕೆಲವೊಂದು ಪ್ರದೇಶಗಳನ್ನು ಕ್ಷೇತ್ರಕಾರ್ಯ ಮಾಡಿ ಮಾಹಿತಿ ಸಂಗ್ರಹಿಸಲಾಗಿದೆ.

ಪ್ರಸ್ತುತ ಸಂಪ್ರಬಂಧದ ವಿಷಯವು ಪೂರ್ಣ ಕ್ಷೇತ್ರಕಾರ್ಯವನ್ನು ಬಯಸುವಂತದ್ದು. ಕ್ಷೇತ್ರಕಾರ್ಯವು ಮ್ಯಾಸನಾಯಕ ಸಮುದಾಯದವರಿಗೆ ಮಾತ್ರ ಸೀಮಿತವಾಗಿರುವುದು. ಲಿಂಗ, ವಯಸ್ಸು, ಶಿಕ್ಷಣ ಮತ್ತು ವೃತ್ತಿ ಮುಂತಾದ ಅಂಶಗಳನ್ನು ಗಮನಿಸಿ ವಿಷಯವನ್ನು ಸಂಗ್ರಹಿಸಲಾಗಿದೆ. ಕ್ಷೇತ್ರಕಾರ್ಯದ ಮೂಲಕ ಮಕ್ಕಳು, ಮಹಿಳೆಯರು, ವೃದ್ಧರು, ವಿದ್ಯಾವಂತ ಮತ್ತು ಅವಿದ್ಯಾವಂತರಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಮಾರುಕಟ್ಟೆಗಳಲ್ಲಿ, ಶಾಲಾ ಆವರಣಗಳಲ್ಲಿ, ಸಾರ್ವಜನಿಕ ಸ್ಥಳಗಳಲ್ಲಿ, ಹೋಟೆಲ್‌ಗಳಲ್ಲಿ, ಆಸ್ಪತ್ರೆಗಳಲ್ಲಿ, ಬಸ್ ನಿಲ್ದಾಣಗಳಲ್ಲಿ, ಗುಂಪುಘರ್ಷಣೆಗಳಲ್ಲಿ ಮತ್ತು ದೇವಾಲಯಗಳಲ್ಲಿ ಮಾಹಿತಿಯನ್ನು ಪಡೆಯಲಾಗಿದೆ. ಸಂಭಾಷಣೆಯ ವಾಕ್ಯಗಳನ್ನು ಧ್ವನಿಮುದ್ರಣದ ಮೂಲಕ ಸಂಗ್ರಹಿಸಲಾಗಿದೆ. ಪ್ರಸ್ತುತ ಅಧ್ಯಯನವು ಹಲವು ದೃಷ್ಟಿಕೋನಗಳಿಂದ ಮಹತ್ವಪೂರ್ಣವಾಗಿದೆ. ಮೊಳಕಾಲ್ಮೂರು ತಾಲೂಕಿನಲ್ಲಿ ನೆಲೆಸಿರುವ ದ್ವಿಭಾಷಿಕ ಸಮುದಾಯದವರಾದ ಮ್ಯಾಸನಾಯಕರು ಬಳಸುವ ಭಾಷೆಯ ಭಾಷಾ ಸ್ವರೂಪವನ್ನು ಈ ಅಧ್ಯಾಯದಲ್ಲಿ ನೋಡಲಾಗಿದೆ. ಮುಂದೆ ದ್ವಿಭಾಷಾ ಸಮುದಾಯಗಳ ಸಮಗ್ರ ಅಧ್ಯಯನಕ್ಕೆ ಈ ಸಂಪ್ರಬಂಧವು ಪೂರಕವಾಗಬಲ್ಲದು ಎಂದು ಭಾವಿಸಲಾಗಿದೆ.

ಪ್ರಸ್ತುತ ವಿಷಯವನ್ನು ನಾಲ್ಕು ಅಧ್ಯಾಯಗಳಲ್ಲಿ ನಿರೂಪಿಸಲಾಗಿದೆ. ಮೊದಲನೆಯ ಅಧ್ಯಾಯವು ಮೊಳಕಾಲ್ಮೂರು ತಾಲೂಕಿನ ಸಂಕ್ಷಿಪ್ತ ಪರಿಚಯ ಮತ್ತು ಮ್ಯಾಸನಾಯಕರ ಜನಾಂಗಿಕ ಹಿನ್ನೆಲೆ ಮತ್ತು ಭಾಷಿಕ ಪರಿಸರವನ್ನು ಕುರಿತು ಮಾಹಿತಿ ನೀಡಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಮ್ಯಾಸನಾಯಕ ಸಮುದಾಯ ದವರ ಭಾಷೆಯು ಕೌಟುಂಬಿಕ ವಲಯ ಮತ್ತು ವ್ಯವಹಾರಿಕ ವಲಯಗಳಲ್ಲಿನ ತೆಲುಗು ಮತ್ತು ಕನ್ನಡ ಭಾಷೆ ಬಳಕೆಯ ಸ್ವರೂಪವನ್ನು ಗಮನಿಸಲಾಗಿದೆ. ಸಂಬಂಧ ವಾಚಕಗಳ, ಸಂಬೋಧನ ರೂಪಗಳ, ಬಳಕೆಯ ಸ್ವರೂಪ ಮತ್ತು ಮಾರುಕಟ್ಟೆ, ಶಾಲಾ ಕಾಲೇಜುಗಳು, ಹೋಟೆಲುಗಳು ಮುಂತಾದ ಕಡೆ ಬಳಕೆಯಾಗುವ

ಭಾಷೆಯನ್ನು ವಿಶ್ಲೇಷಿಸಲಾಗಿದೆ. ಮೂರನೆಯ ಅಧ್ಯಾಯದಲ್ಲಿ ಮ್ಯಾಸನಾಯಕರ ಮಾತೃಭಾಷೆಯಾದ ತೆಲುಗಿನ ಮೇಲೆ ಕನ್ನಡದ ಪ್ರಭಾವ ಮತ್ತು ಅವರ ವ್ಯವಹಾರಿಕ ಭಾಷೆಯಾದ ಕನ್ನಡದ ಮೇಲೆ ತೆಲುಗಿನ ಪ್ರಭಾವಕ್ಕೆ ಸಂಬಂಧಿಸಿದ ಮಾಹಿತಿಯನ್ನು ವಿಶ್ಲೇಷಿಸಲಾಗಿದೆ. ಮ್ಯಾಸನಾಯಕರ ಭಾಷೆಯಲ್ಲಿ ಬಳಕೆಯಾಗುವ ವಿಶಿಷ್ಟ ಪದಗಳನ್ನು ಗುರುತಿಸಲಾಗಿದೆ. ನುಡಿಜಗಿತ, ನುಡಿಬೆರಕೆ ಪ್ರಕ್ರಿಯೆ, ಭಾಷಾ ಮನೋಭಾವನೆ ಮತ್ತು ಸಂಗೋಪನೆ ಪ್ರಕ್ರಿಯೆಗಳನ್ನು ಕುರಿತು ವಿವರಿಸಲಾಗಿದೆ. ನಾಲ್ಕನೇ ಅಧ್ಯಾಯದಲ್ಲಿ ಭಾಷಿಕ ಸಂದರ್ಭಗಳನ್ನು ಕುರಿತು ವಿವರಿಸಲಾಗಿದೆ. ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ವಲಯಗಳಲ್ಲಿ ಭಾಷಾಬಳಕೆಯ ಮಾಹಿತಿಯನ್ನು ವಿವರಿಸಲಾಗಿದೆ. ಕೊನೆಯ ಹಂತದಲ್ಲಿ ಸಮಾರೋಪ ಮತ್ತು ಅನುಬಂಧ ನೀಡಿದ್ದೇನೆ. ಅನುಬಂಧ - ೧ ರಲ್ಲಿ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿಯನ್ನು ನೀಡಲಾಗಿದೆ. ಅನುಬಂಧ - ೨ ರಲ್ಲಿ ಮ್ಯಾಸನಾಯಕರ ಬೆಡಗು ಮತ್ತು ದೈವಗಳಿಗೆ ಸಂಬಂಧಿಸಿದ ಪದಕೋಶವನ್ನು ನೀಡಲಾಗಿದೆ. ಅನುಬಂಧ - ೩ ರಲ್ಲಿ ವಕ್ತೃ ವಿವರಗಳ ಪಟ್ಟಿಯನ್ನು ನೀಡಲಾಗಿದೆ. ಕೊನೆಯಲ್ಲಿ ಪರಾಮರ್ಶನ ಗ್ರಂಥಗಳ ಪಟ್ಟಿಯನ್ನು ನೀಡಲಾಗಿದೆ.

❖❖

# ೨

# ಮ್ಯಾಸನಾಯಕರ ಭೌಗೋಳಿಕ ನೆಲೆ - ಜನಾಂಗಿಕ ಹಿನ್ನೆಲೆ

## ೨.೧. ಮೊಳಕಾಲ್ಮೂರು ತಾಲೂಕಿನ ಸಂಕ್ಷಿಪ್ತ ಪರಿಚಯ

೧. ಭೌಗೋಳಿಕ ಪರಿಸರ

೨. ಚಾರಿತ್ರಿಕ ಹಿನ್ನಲೆ

೩. ಜನಾಂಗಿಕ ಹಿನ್ನಲೆ

೪. ಭಾಷಿಕ ಪರಿಸರ

# ೨

# ಮ್ಯಾಸನಾಯಕರ ಭೌಗೋಳಿಕ ನೆಲೆ - ಜನಾಂಗಿಕ ಹಿನ್ನೆಲೆ

## ೨.೧. ಮೊಳಕಾಲ್ಮೂರು ತಾಲೂಕಿನ ಸಂಕ್ಷಿಪ್ತ ಪರಿಚಯ

### ೧. ಭೌಗೋಳಿಕ ಪರಿಸರ

ಮೊಳಕಾಲ್ಮೂರು ಚಿತ್ರದುರ್ಗ ಜಿಲ್ಲೆಯ ಒಂದು ತಾಲೂಕುಕೇಂದ್ರ. ಈ ಪ್ರದೇಶವು ಅನಾವೃಷ್ಠಿ ಅಭಾವಗಳಿಗೆ ಹೆಸರಾದ ಹಿಂದುಳಿದ ತಾಲೂಕಾಗಿದೆ. ತಾಲೂಕಿನ ಉತ್ತರ ಅಕ್ಷಾಂಶ ೧೪° ೪ ರಿಂದ ೧೫° ೦೨ ಮತ್ತು ಪೂರ್ವ ರೇಖಾಂಶ ೭೬° ೪೧ ರಿಂದ ೭೭° ೦೧ ರವರೆಗೆ ಚಾಚಿಕೊಂಡಿದೆ. ಈ ತಾಲೂಕಿನ ಪೂರ್ವಕ್ಕೆ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ರಾಯದುರ್ಗ ತಾಲೂಕು, ಪಶ್ಚಿಮ ಮತ್ತು ಉತ್ತರಕ್ಕೆ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ಮತ್ತು ಸಂಡೂರು ತಾಲೂಕುಗಳನ್ನು ಹಾಗೂ ದಕ್ಷಿಣಕ್ಕೆ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕುಗಳನ್ನು ಮೇರೆಗಳನ್ನಾಗಿ ಹೊಂದಿದೆ.

ಈ ತಾಲೂಕಿನ ವಿಸ್ತೀರ್ಣ ೭೩೭ ಚದರ ಕಿಲೋಮೀಟರುಗಳು. ಈ ತಾಲೂಕು ಒಟ್ಟು ೯೧ ಗ್ರಾಮಗಳನ್ನು ಹೊಂದಿದ್ದು, ೭೫ ಗ್ರಾಮಗಳಲ್ಲಿ ಮ್ಯಾಸನಾಯಕರ ಜನವಸತಿ ಇದೆಯೆಂದು ಹೇಳಬಹುದು. ಈ ಪ್ರದೇಶವು ಬಯಲುಸೀಮೆಗೆ ಸೇರಿದ ಪ್ರದೇಶವಾಗಿದ್ದ ರಿಂದ ಇಲ್ಲಿ ಮಳೆಯ ಪ್ರಮಾಣ ಕಡಿಮೆಯಾಗಿ ತೀವ್ರ ನೀರಿನ ಅಭಾವ ಪರಿಸ್ಥಿತಿಯನ್ನು ಎದುರಿಸುತ್ತಿದೆ. ಬಿಸಿಲಿನ ತಾಪಮಾನವೂ ಹೆಚ್ಚಾಗಿ ಕಂಡುಬರುತ್ತಿದೆ. ಈ ತಾಲೂಕಿನಲ್ಲಿ ಯಾವುದೇ ದೊಡ್ಡ ನದಿಗಳು ಹರಿಯದಿದ್ದರೂ, ತುಂಗಭದ್ರಾ ನದಿಯ ಮುಖ್ಯ

ಉಪನದಿಯಾದ 'ಜನಗನಹಳ್ಳ' (ಚಿನ್ನಹಗರಿ) ಹರಿಯುತ್ತದೆ. ಈ ನದಿಯನ್ನು 'ಅಘುಹರಿ' ಅಥವಾ 'ಪಾಪನಾಶಿನಿ' ಎಂಬ ಹೆಸರುಗಳಿಂದ ಕರೆಯುತ್ತಾರೆ. ಚಿನ್ನಹಗರಿ ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲೂಕಿನಲ್ಲಿ ಹುಟ್ಟಿ ಜನಗನಹಳ್ಳ ಎಂಬ ಹೆಸರಿನಿಂದ ಚಿತ್ರದುರ್ಗ, ಜಗಳೂರು, ಮೊಳಕಾಲ್ಮೂರು ತಾಲೂಕುಗಳಲ್ಲಿ ಹರಿದು, ಅನೇಕ ಕೆರೆಗಳಿಗೆ ಜಲಮೂಲವಾಗಿದ್ದು, ಮುಂದೆ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕನ್ನು ಪ್ರವೇಶಿಸಿ, ಮೊಳಕಾಲ್ಮೂರು ಪ್ರದೇಶದಲ್ಲಿ ಹರಿದು ಆಂಧ್ರಪ್ರದೇಶವನ್ನು ಸೇರುತ್ತದೆ. ಈ ನದಿಗೆ ಕೆಲವು ಸಣ್ಣ ಪುಟ್ಟ ಹಳ್ಳಗಳು ಬಂದು ಸೇರುತ್ತವೆ. ಈ ನದಿಗೆ ರಂಗಯ್ಯನದುರ್ಗ ಜಲಾಶಯ ಅಣೆಕಟ್ಟನ್ನು ನಿರ್ಮಿಸಿದ್ದಾರೆ. ಈ ಜಲಾಶಯದಿಂದ ಕೆಲವು ಕೆರೆಗಳಿಗೆ ನೀರು ಸರಬರಾಜಾಗಿ ನೀರಾವರಿ ವ್ಯವಸ್ಥೆಯಿಂದ ಕೆಲವೊಂದು ಹಳ್ಳಿಗಳಿಗೆ ಉಪಯುಕ್ತವಾಗಿದೆ. ರಾಂಪುರದ ಬಳಿ 'ಗುಂಡೇರಿಹಳ್ಳ' ಇದೆ. ಇದು ಮಳೆಗಾಲದ ಸಮಯದಲ್ಲಿ ಹರಿಯುತ್ತದೆ. ಈ ತಾಲೂಕಿನಲ್ಲಿ ಅಂತರ್ಜಲ ಸಂಪತ್ತು ಇರುವುದರಿಂದ ಇಲ್ಲಿನ ರೈತರು ಪಂಪ್‌ಸೆಟ್‌ಗಳ ಸಹಾಯದಿಂದ ವ್ಯವಸಾಯಕ್ಕೆ ನೀರನ್ನು ಬಳಸಿಕೊಂಡಿದ್ದಾರೆ. ಇಲ್ಲಿನ ಭೂಮಿ ಕಪ್ಪುಮಿಶ್ರಿತ, ಕೆಂಪುಮಣ್ಣು, ಚೌಳು ಮಣ್ಣಿನಿಂದ ಕೂಡಿರುವುದನ್ನು ಕಾಣಬಹುದು. ಇಲ್ಲಿ ಮುಖ್ಯವಾಗಿ ಜೋಳ, ಹತ್ತಿ, ಶೇಂಗಾ, ಈರುಳ್ಳಿ ಬೆಳೆಗಳನ್ನು ಬೆಳೆಯುತ್ತಾರೆ.

ಈ ತಾಲೂಕಿನ ಪೂರ್ವಶ್ರೇಣಿಯು ಕಣಶಿಲೆಯ ಬೆಟ್ಟಗುಡ್ಡಗಳಿಂದ ತುಂಬಿದ ಸಾಲಿನಂತೆ ಕಾಣುತ್ತದೆ. ಎಲ್ಲಾ ಬೆಟ್ಟಗಳು ನಗ್ನಶಿಲಾಮಯವಾಗಿವೆ ಎಂದು ಹೇಳಬಹುದು. ಇವುಗಳಲ್ಲಿ ಮುಖ್ಯವಾದ ಬೆಟ್ಟಗಳು ಕೆಳಗಿನಂತಿವೆ.

| | | |
|---|---|---|
| ೧. | ಜಟಿಂಗ ರಾಮೇಶ್ವರ ಬೆಟ್ಟ | ೩೪೬೯ ಅಡಿ |
| ೨. | ನುಂಕ ಭೈರವನ ಬೆಟ್ಟ | ೩೦೨೨ ಅಡಿ |
| ೩. | ಬ್ರಹ್ಮಗಿರಿ ಬೆಟ್ಟ | ೨.೩೧೭ ಅಡಿ |
| ೪. | ಜೋಗಪ್ಪನಗುಡ್ಡ | ೨.೯೩೬ ಅಡಿ |

ಈ ಬೆಟ್ಟಗಳನ್ನು ಇನ್ನೂ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಈ ಪ್ರದೇಶಗಳಲ್ಲಿ ಅಲೆದಾಡಿದ ಆಂಗ್ಲ ಇತಿಹಾಸಜ್ಞ ಬ್ರೂಸ್‌ಫೂಟ್ "ಈ ಬೆಟ್ಟ - ಪ್ರದೇಶಗಳು ವಿಶಿಷ್ಟ ಸೌಂದರ್ಯದಿಂದ ಕೂಡಿವೆ"[೧] ಎಂದು ಹೇಳಿದ್ದಾರೆ.

ಮೊಳಕಾಲ್ಮೂರು ಪ್ರದೇಶದಲ್ಲಿ ಸಂಪತ್ಭರಿತವಾದ ಅರಣ್ಯಸಂಪತ್ತಾಗಲೀ, ಖನಿಜ ಸಂಪತ್ತಾಗಲೀ ಕಂಡುಬರುವುದಿಲ್ಲ. ಈ ತಾಲೂಕಿನ ಜನಸಂಖ್ಯೆಯಲ್ಲಿ ಬಹುಸಂಖ್ಯಾಯತರು ಹಿಂದೂಗಳಾಗಿದ್ದೂ, ಅವರಲ್ಲಿ ಮ್ಯಾಸನಾಯಕರೇ ಹೆಚ್ಚು ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಆರ್ಥಿಕವಾಗಿ ಬಹಳ ಹಿಂದುಳಿದ ಜನತೆ ಹೆಚ್ಚಾಗಿ ಕಂಡುಬರುತ್ತಾರೆ. ಇಲ್ಲಿನ ಜನತೆಯ ಮುಖ್ಯ ಕಸುಬು ವ್ಯವಸಾಯವಾದರೂ ಸಹ ಕೂಲಿ ಜೀವನವನ್ನೇ ಹೆಚ್ಚಾಗಿ ಅವಲಂಬಿಸಿದ್ದಾರೆ. ಅತಿ ಬರಗಾಲದ ಸಂದರ್ಭದಲ್ಲಿ ಬೇರೆ ಕಡೆಗೆ ವಲಸೆ ಹೋಗಿ ಜೀವನ ಮಾಡುವುದು ಕಂಡುಬರುತ್ತದೆ.

## ೨. ಚಾರಿತ್ರಿಕ ಹಿನ್ನೆಲೆ

ಮೊಳಕಾಲ್ಮೂರು ತಾಲೂಕಿನ ಇತಿಹಾಸವು ಬಹಳ ಪ್ರಾಚೀನವಾದದು ಪೂರ್ವ ಶಿಲಾಯುಗದಿಂದಲೂ ಜನವಸತಿ ಇತ್ತೆಂಬುವುದಕ್ಕೆ ಈ ತಾಲೂಕಿನ ಹಲವು ಭಾಗಗಳಲ್ಲಿ ದೊರೆತಿರುವ ಬೃಹತ್ ಶಿಲಾಸಮಾದಿಗಳು, ಇತರ ಪ್ರಾಚೀನ ಅವಶೇಷಗಳು ಹಾಗೂ ಬ್ರಹ್ಮಗಿರಿಯಲ್ಲಿ ನಡೆದಿರುವ ಉತ್ಖನನಗಳಿಂದ ಸ್ವಯಂವೇದ್ಯವಾಗಿದೆ. ಇಲ್ಲಿನ ಇತಿಹಾಸವನ್ನು ಕ್ರಿ.ಪೂ. ೩ನೇ ಶತಮಾನದಿಂದಲೂ ಗುರುತಿಸಬಹುದು. ಈ ಪ್ರದೇಶವು ಮೌರ್ಯ ಸಾಮ್ರಾಜ್ಯಕ್ಕೆ ಸೇರಿತ್ತು ಎಂಬುದು ಬ್ರಹ್ಮಗಿರಿ, ಸಿದ್ಧಾಪುರ, ಜಟಿಂಗ ರಾಮೇಶ್ವರಗಳಲ್ಲಿ ದೊರೆತಿರುವ ಅಶೋಕನ ಶಾಸನಗಳಿಂದ ವ್ಯಕ್ತವಾಗುತ್ತದೆ. ಬ್ರಹ್ಮಗಿರಿಯ ಸುತ್ತ ಮುತ್ತ ವಿಸ್ತಾರವಾದ ಭೂಶೋಧನೆ ನಡೆದು, ಈ ತಾಲೂಕಿನ ಪ್ರಾಕ್ತನ ಸಂಸ್ಕೃತಿಯ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುವಂತಾಗಿದೆ.

ಬ್ರಹ್ಮಗಿರಿಯಲ್ಲಿ ನಡೆದ ಉತ್ಖನನದಲ್ಲಿ ಕೆಲವು ಬಗೆಯ ಸಂಸ್ಕೃತಿಗಳು ಕಂಡುಬಂದಿವೆ. ಅತ್ಯಂತ ಪ್ರಾಚೀನವಾದ ನವ ಶಿಲಾಯುಗದ ಸಂಸ್ಕೃತಿ (ಇದರ ಮುಖ್ಯ ಕುರುಹು ಕರಿಯ ಕಲ್ಲಿನ ಕೊಡಲಿಯಂಥ ಉಜ್ಜಿ ನಯ ಮಾಡಿದ ಆಯುಧಗಳು) ಕಬ್ಬಿಣ ಯುಗದ ಬೃಹತ್ ಶಿಲಾ ಸಂಸ್ಕೃತಿ-ದಪ್ಪಗುಂಡುಗಳನ್ನು ದುಂಡಗೆ ಜೋಡಿಸಿ ಕಲ್ಲಿನ ಶವಪೆಟ್ಟಿಗೆಯಲ್ಲೋ, ಆಳವಾದ ಕುಳಿಯಲ್ಲೋ, ಹಲವಾರು ಬಗೆಯ ಹೊಳಪಿನ ಮಡಕೆಗಳನ್ನು, ಕಬ್ಬಿಣದ ಆಯುಧಗಳನ್ನಿಟ್ಟು ವಿಶಿಷ್ಟವಾಗಿ ನಡೆಸುತ್ತಿದ್ದ ಶವಸಂಸ್ಕಾರ, ಈ ಸಂಸ್ಕೃತಿಯ ಹೆಗ್ಗುರುತು. ಬ್ರಹ್ಮಗಿರಿಯಲ್ಲಿ ಇಂಥಾ ಬೃಹತ್ ಶಿಲಾಸಮಾಧಿಗಳು ದೊರೆತಿವೆ. ಬೆಟ್ಟದ ಮೇಲೆ ರಮಣೀಯವಾದ ಸುಂದರವಾದ ಅರಮನೆಯನ್ನು ಕಾಣಬಹುದು. ಈಗ ಅದನ್ನು ಮಠ ಎಂದು ಕರೆಯುತ್ತಾರೆ. ಈ ಮಠದ ಮುಂದೆ ತ್ರಿಶಂಕೇಶ್ವರನೆಂಬ ಹೆಸರಿನ ದೇವಾಲಯವಿದೆ. ಈ ದೇವಾಲಯದ ಶಾಸನದಿಂದ ಇದು ಪೂರ್ವದಲ್ಲಿ ಜೈನರ ರಾಜಧಾನಿಯಾಗಿತ್ತು ಎನ್ನುವುದು ತಿಳಿಯುತ್ತದೆ.

ಇದಾದ ನಂತರ ಇತಿಹಾಸ ಆರಂಭ ಕಾಲದ ನಾಗರಿಕತೆಯನ್ನು ಗುರುತಿಸಲಾಗಿದೆ. ಕ್ರಿ.ಪೂ. ಮೂರನೆಯ ಶತಮಾನದಲ್ಲಿ ಆರಂಭವಾದ ಈ ಸಂಸ್ಕೃತಿಯಲ್ಲಿ ಇಟ್ಟಿಗೆ ಕಟ್ಟಡಗಳನ್ನು ಕಟ್ಟಿರುವುದನ್ನು ಕಾಣಬಹುದು. ಬ್ರಹ್ಮಗಿರಿ ಬೆಟ್ಟದ ಇಳಿಜಾರಿನಲ್ಲಿ ಕಟ್ಟಿರುವ ಚೈತ್ಯಾಕಾರದ ಕಟ್ಟಡ ಇವುಗಳಲ್ಲಿ ಮುಖ್ಯವಾದದ್ದು. ಮೊಳಕಾಲ್ಮೂರು ತಾಲೂಕಿನ ಸುತ್ತಮುತ್ತಲ ಪ್ರದೇಶದಲ್ಲಿ ಚಿಕ್ಕ ಚಿಕ್ಕ ಮೋರ್‍ಯರ ಮನೆಗಳನ್ನು ಕಾಣಬಹುದು. ನೀಲಗಿರಿಯ ಬಡಗರು ಮೋರ್‍ಯರು ಮನೆಗಳೆಂದು ಕರೆಯುತ್ತಾರೆ. ಇವುಗಳನ್ನು ಪೂರ್ವಕಾಲೀನರು ಶವಗಳನ್ನು ಭೂಮ್ಯಂತರ್ಗತಗಳನ್ನಾಗಿ ಮಾಡುತ್ತಿದ್ದುದರ ಸ್ಮಾರಕಗಳೆಂದು ನಿಸ್ಸಂದೇಹವಾಗಿ ಹೇಳಬಹುದು.

ಬ್ರಹ್ಮಗಿರಿ, ಸಿದ್ದಾಪುರ, ಜಟಿಂಗ ರಾಮೇಶ್ವರಗಳಲ್ಲಿ ದೊರೆತಿರುವ ಶಾಸನಗಳನ್ನು ಆಳವಾಗಿ ದಪ್ಪವಾಗಿ ಬ್ರಾಹ್ಮಿಲಿಪಿ ಮತ್ತು ಪ್ರಾಕೃತ ಮತ್ತು ಖರೋಷ್ಠಿ ಪಾಳಿ ಭಾಷೆಯಲ್ಲಿ ಕೆತ್ತಿಸಿದ್ದಾರೆ. ಈ ಶಾಸನಗಳು 'ಇಸಿಲ' ಪಟ್ಟಣದ ಬಗ್ಗೆ ಬೆಳಕನ್ನು ಚೆಲ್ಲುತ್ತವೆ.

ಮೊಳಕಾಲ್ಮೂರು ಬೆಟ್ಟದಲ್ಲಿ ಕದಂಬ ದೊರೆಗಳು ಕಟ್ಟಿಸಿದ ಕೋಟೆಯಿದ್ದು, ಅದು 'ಲುಂಕೆಕೋಟೆ' ಎಂದು ಹೆಸರಾಗಿದೆ. ಜಟಿಂಗ ರಾಮೇಶ್ವರ ಬೆಟ್ಟದ ಮೇಲೆ ಉತ್ತರದ ಬಂಡೆಗಳ ಕೆಳಗೆ ಇರುವ ತಣ್ಣೀರಿನ ದೋಣೆಯ ಬಳಿ ಶ್ರೀರಾಮನು ಜಟಾಯುವಿಗೆ ಅಗ್ನಿಸಂಸ್ಕಾರ ಮಾಡಿದನೆಂಬ ಹೇಳಿಕೆ ಉಂಟು. ಆ ನಂತರ ಕೆಲವು ದಿನ ಅಲ್ಲಿ ಏಕಾಂತನಾಗಿ ತಂಗಿದ್ದನಂತೆ ಅದಕ್ಕಾಗಿ ಈ ದೋಣೆ 'ಏಕಾಂತ ತೀರ್ಥ'ವೆಂದು ಹೆಸರಾಗಿದೆ ಎಂಬ ಐತಿಹ್ಯವಿದೆ. ಬುದ್ಧನಿಗೆ ಏಕನಾತನೆಂದು ಹೆಸರಿದ್ದು, ಬೌದ್ಧರು ನೆಲೆಸಿದ ಸ್ಥಳವಾದ್ದರಿಂದ 'ಏಕಾಂತತೀರ್ಥ' ಹೆಸರು ಬಂದಂತೆ ಕಾಣುತ್ತದೆ. ಈ ಬೆಟ್ಟದ ಮೇಲೆ 'ಸೀತಾದೋಣೆ' ಎಂಬ ನೀರಿನ ದೋಣೆಯಿದೆ. ಈ ಪ್ರದೇಶದಲ್ಲಿ ಅಕ್ಷರಗುಂಡು ಎಮ್ಮಿತನ ಗುಂಡು ಮತ್ತು ಬಳಗಾರರ ಗುಂಡು ೩ ಬಂಡೆಗಲ್ಲು ಶಾಸನಗಳು ಲಭ್ಯವಾಗಿವೆ. ಇವು ಬೌದ್ಧ ಧರ್ಮದ ಕುರುಹುವಿಗೆ ಸಾಕ್ಷಿಯಾಗಿವೆ. ಇಂಥ ಚಾರಿತ್ರಿಕ ಪರಿಸರದಲ್ಲಿ ವಾಸಿಸುತ್ತಿರುವ ಮ್ಯಾಸನಾಯಕರು ಈ ಪ್ರದೇಶಕ್ಕೆ ಯಾವಾಗ ಬಂದರು ಎಂಬುದಕ್ಕೆ ಖಚಿತವಾದ ಆಧಾರಗಳು ದೊರೆತಿಲ್ಲ.

ಮೊಳಕಾಲ್ಮೂರು ಪ್ರದೇಶವನ್ನು ಶಾತವಾಹನರು, ಕದಂಬರು ಆಳ್ವಿಕೆ ಮಾಡಿದ್ದರು. ಅಲ್ಲದೆ ಈ ಪ್ರದೇಶವು ರಾಷ್ಟ್ರಕೂಟರ ಆಳ್ವಿಕೆಗೂ ಸೇರಿತ್ತು. ೧೦ನೆಯ ಶತಮಾನದಲ್ಲಿ ನೊಳಂಬವಾಡಿ ೩೨೦೦೦ ಸೀಮೆಯಲ್ಲಿ ಸೇರ್ಪಡೆಗೊಂಡಿತ್ತು. ತದನಂತರ ಕಲ್ಯಾಣಿ ಚಾಲುಕ್ಯರ, ಹೊಯ್ಸಳರ ಹಾಗೂ ವಿಜಯನಗರದ ಅರಸರ ಆಳ್ವಿಕೆಗೂ ಒಳಪಟ್ಟಿತು. ಮುಂದೆ ಇದು ರಾಯದುರ್ಗದ ಪಾಳೆಯಗಾರರ ಆಡಳಿತಕ್ಕೆ ಸೇರಿತು. ಹಟ್ಟಿಯ ಪಾಳೆಯಗಾರ ಮಲ್ಲಪ್ಪನಾಯಕನು ಈ ಪ್ರದೇಶವನ್ನು ರಾಯದುರ್ಗದ ಬೊಮ್ಮನಾಯಕನಿಗೆ ೨೦೦೦ ಕಪ್ಪು ಹಸುಗಳನ್ನು ೧೦೦೦ ಬಿಳಿ ಹಸುಗಳನ್ನು ಕೊಟ್ಟು ಪಡೆದುಕೊಂಡು ಇಲ್ಲಿನ ಬೆಟ್ಟದ ಮೇಲಣ ಕೋಟೆ ಹಾಗೂ ಸರೋವರಗಳನ್ನು ಕಟ್ಟಿಸಿದನು. ಮುಂದೆ ಇದು ಬಿಚ್ಚುಗತ್ತಿ ಭರಮಣ್ಣ ನಾಯಕನ ಕಾಲದಲ್ಲಿ ಕ್ರಿ.ಶ. (೧೬೮೯-೧೭೨೧) ಚಿತ್ರದುರ್ಗದ ಪಾಳೆಯಗಾರರ ಆಳ್ವಿಕೆಯಲ್ಲಿ ಲೀನವಾಯಿತು. ಆನಂತರ ಹೈದರ್-ಟಿಪ್ಪು ಬ್ರಿಟಿಷರ ಮೈಸೂರು ಒಡೆಯರ ಆಳ್ವಿಕೆಗೆ ಒಳಗಾಗಿ, ೧೮೮೬ರಲ್ಲಿ ಚಿತ್ರದುರ್ಗ ಜಿಲ್ಲೆಯ ವ್ಯಾಪ್ತಿಗೆ ಮೊಳಕಾಲ್ಮೂರು ಪ್ರದೇಶವು ಸೇರಿತು.

## ನಾಯಕ ಜನಾಂಗದ ಹಿನ್ನೆಲೆ

ಪ್ರಾಚೀನ ಕಾಲದಲ್ಲಿ ಮಾನವನು ಪ್ರಾಣಿಗಳಂತೆ ಅರಣ್ಯದಲ್ಲಿ ಜೀವನವನ್ನು ಮಾಡುತ್ತಿದ್ದನು. ಪ್ರಾಣಿಗಳಂತೆ ಬೇಟೆಯಾಡಿ ಆಹಾರವನ್ನು ಸಂಗ್ರಹಿಸಿ ಜೀವನ ಸಾಗಿಸುತ್ತಿದ್ದನು. ಅರಣ್ಯದಲ್ಲಿ ಒಂದೆಡೆ ಋಷಿಗಳು ಯಜ್ಞ - ಯಾಗಾದಿಗಳನ್ನು ಮಾಡಿಕೊಂಡು ಸಾಹಿತ್ಯ ಸಂಸ್ಕೃತಿಯ ನಿರ್ಮಾತೃಗಳಾಗಿ ವಾಸಿಸುತ್ತಿದ್ದರು. ಮತ್ತೊಂದು ಕಡೆ ಬೇಟೆಯಾಡಿ ಆಹಾರವನ್ನು ಸಂಗ್ರಹಿಸಿಕೊಳ್ಳುತ್ತಾ ಜೀವನ ನಡೆಸುತ್ತಿದ್ದ ಜನರಿದ್ದರು ಎನ್ನುವ ಮಾತನ್ನು ಅನೇಕ ವಿದ್ವಾಂಸರು ಹೇಳುತ್ತಾರೆ. ಇಂಥ ಜನರಲ್ಲಿ ಬೇಡ ಅಥವಾ ನಾಯಕ ಜನಾಂಗದವರೂ ಇದ್ದರು. (ಬೇಡ ಅಥವಾ ನಾಯಕ ಎನ್ನುವ ಜನಾಂಗದ ಹೆಸರು ತುಂಬಾ ಇತ್ತೀಚಿನದು)

"ಬೇಡ ಪದವು ಬೇಟೆಯಾಡುವವ ಎಂಬ ದ್ರಾವಿಡ ಪದದಿಂದಲೇ ಅದು ನಿಷ್ಪನ್ನಗೊಂಡಿದೆ. ತಮಿಳು, ತೆಲುಗು ಭಾಷೆಯಲ್ಲಿ ಕನ್ನಡದ ಬೇಟೆಗೆ ಬದಲಾಗಿ ವೇಟೆ ಪದವಿದ್ದು, ಬೇಟೆಗಾರ ಎಂಬುದಕ್ಕೆ ವೇಟಗಾರ, ವೇಟಗಾಡು ಎಂಬ ಪದಗಳಿವೆ"[೨] ಮೂಲತಃ ಕಾಡಿನಲ್ಲಿ ವಾಸವಾಗಿದ್ದುಕೊಂಡು ಬೇಟೆ ವೃತ್ತಿಯಿಂದ ಬದುಕುವ ಜನಾಂಗವನ್ನು ಬೇಡರು ಎಂದು ಕರೆಯುವುದುಂಟು. ಇವರನ್ನು ಬೇರಾದ್, ಕಿರಾತ್, ಶಬರ, ವ್ಯಾಧ, ಏಕಲವ್ಯ ಮುಂತಾದ ಹೆಸರುಗಳಿಂದ ಬೇಡರನ್ನು ಗುರುತಿಸಬಹುದು. ಇವರಿಗೆ "ದ್ರಾವಿಡ ಭಾಷೆಯಲ್ಲಿ ವೇಡನ್, ವೆಟ್ಟುವನ್ ಎಂದೂ, ಹಳೆಗನ್ನಡದಲ್ಲಿ ವೇಡರ್, ವೇಳರ್, ವಿದಿರ್ ಬಿಲ್ಲಿ, ಬೇಂಟಿಯರ್, ಬೇಂಟಕಾರ್, ವಿಯದರ್, ಬಿಯದರ್, ಕಣೆಂದರ್, ಕೋವರ್ ಎಂಬ ಸಂವಾದಿ ಪದಗಳನ್ನು ಬಳಸಲಾಗಿದೆ."[೩]

"ವಿದೇಶಿ ವಿದ್ವಾಂಸರಾದ ಬುಖಾನನ್ ಅವರು 'ಬೇಡರು ಮೂಲತ: ದ್ರಾವಿಡ ಜನಾಂಗಕ್ಕೆ ಸೇರಿದವರಾಗಿರಬಹುದು' ಎಂದು ಹೇಳಿದ್ದಾರೆ. ಉತ್ತರ ಮಲಬಾರಿನ ಪರಿಂಗಾಲ್ ಪೆಟ್‌ವಾನ್ಸ್ ಅವರು ಟ್ರಿವೆಂಕೋರಿನ ಮಾಲವೇದನ್ಸ್, ಸಿಲೋನಿನ ವೆಡ್ಡಾ ಮತ್ತು ಕರ್ನಾಟಕದ ಬೇಡರು ಒಂದೇ ಮೂಲದವರೆಂಬುದು ರೈಸ ಅವರ ಅಭಿಪ್ರಾಯವಾಗಿದೆ. ವ್ಯಾಪಕವಾದ ತೌಲನಿಕ ಅಧ್ಯಯನದ ಮೂಲಕ ಈ ಅಭಿಪ್ರಾಯ ಖಚಿತ ರೂಪ ಪಡೆಯಬೇಕಿದೆ."[೪] ಈ ಜನಾಂಗವೂ ಪ್ರಾಚೀನ ಕಾಲದಿಂದಲೂ ಇತ್ತೆಂಬುದಕ್ಕೆ ಪೌರಾಣಿಕವಾಗಿಯೂ, ಚಾರಿತ್ರಿಕವಾಗಿಯೂ ಅನೇಕ ಉಲ್ಲೇಖಗಳು ದೊರೆಯುತ್ತವೆ. ಭಾರತದೇಶದ ಆದಿಕಾವ್ಯವೆಂದು ಹೆಸರಾದ ರಾಮಾಯಣವನ್ನು ರಚಿಸಿದವನು ಬೇಡನಾದ ವಾಲ್ಮೀಕಿ ಮುನಿ. ಈತ ಪೂರ್ವಾಶ್ರಮದಲ್ಲಿ ದರೋಡೆಗಾರನಾಗಿದ್ದು, ಸಪ್ತರ್ಷಿಗಳ ಪ್ರಭಾವದಿಂದಾಗಿ ತನ್ನ ಕ್ರೂರ ವೃತ್ತಿಯನ್ನು ತ್ಯಾಗ ಮಾಡಿದನು. ಆಮೇಲೆ ರಾಮಾಯಣ ರಚಿಸಿ 'ಆದಿಕವಿ' ಎಂದು ಖ್ಯಾತನಾದನು. ಇದು ಪರಂಪರೆಯಿಂದ ಬಂದ ಹೇಳಿಕೆಯಾದರೂ ರಾಮಾಯಣದ ಕರ್ತೃತ್ವವನ್ನು ಕುರಿತಂತೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಲ್ಲಿ, ವಾಲ್ಮೀಕಿಯು ತಾನು ಪಟ್ಟ ಪರಿಶ್ರಮದಿಂದ ಆದಿಕವಿಯಾಗಿ ಪರಿವರ್ತನೆಗೊಂಡಿದ್ದು ಸ್ವಾಭಾವಿಕ. ವಿಶೇಷವಾಗಿ 'ರಾಮನಾಮ' ಮಹಿಮೆಯನ್ನು ಪ್ರತಿಷ್ಠಾಪಿಸಲೋಸುಗ ವಾಲ್ಮೀಕಿ ತನ್ನ ಪೂರ್ವಾಶ್ರಮದಲ್ಲಿನ ದೃಷ್ಟನಿದ್ದನೆಂದೂ ರಾಮನಾಮದ ಮಹಿಮೆಯಿಂದ ಋಷಿಯಾದನೆಂದು ಹೇಳುವುದು ಅದರ ಮುಖ್ಯ ಆಶಯವಾಗುತ್ತದೆ. ಈ ಹೇಳಿಕೆಯನ್ನು ನಂಬುವುದಾದರೆ ವಾಲ್ಮೀಕಿಯು ಬೇಟೆಯೇ ಜೀವನ ವೃತ್ತಿಯಾಗಿದ್ದ ಬೇಡ ಜನಾಂಗಕ್ಕೆ ಸೇರಿದವರೆಂದು ಭಾವಿಸಬೇಕಾಗುತ್ತದೆ.

ರಾಮಾಯಣದಲ್ಲಿ ಬರುವ 'ಶಬರಿ'ಯು ಸಹ ಬೇಡ ಕುಲದವಳು ಎಂದು ಹೇಳಲಾಗಿದೆ. ರಾಮನ ಭಕ್ತಳಾಗಿ ಪಂಪಾಕ್ಷೇತ್ರದ ಸಮೀಪ ಇವಳು ವಾಸವಾಗಿದ್ದಳು. ರಾಮ - ಲಕ್ಷ್ಮಣರು ಅಲ್ಲಿಗೆ ಆಗಮಿಸಿದಾಗ ಅವರಿಗೆ ಬೋರೆಯ ಹಣ್ಣುಗಳನ್ನು ನೀಡಿ ಸತ್ಕರಿಸಿದಳೆಂದೂ ಹೇಳಲಾಗಿದೆ.

ಮಹಾಭಾರತದಲ್ಲಿ ಬೇಡ ಜನಾಂಗದ ಬಗ್ಗೆ ಸಾಕಷ್ಟು ಉಲ್ಲೇಖಗಳಿದ್ದು, ಪುಲಿಂದ, ನಿಷಾದ, ಕಿರಾತ, ವ್ಯಾಧ ಮುಂತಾದ ಹೆಸರುಗಳು ಕಂಡುಬರುತ್ತವೆ. ನಿಷಾದನೆಂಬ ರಾಜನ ಮಗನಾದ ಏಕಲವ್ಯ ಬೇಡನಾಗಿದ್ದು, ದ್ರೋಣನು ಆಶ್ಚರ್ಯಪಡುವ ರೀತಿಯಲ್ಲಿ ವಿದ್ಯೆಯನ್ನು ಕಲಿತಿದ್ದನು. ಶಿವನ ಇಪ್ಪತ್ತೈದು ಲೀಲೆಗಳಲ್ಲಿ ಒಂದಾದ ಕಿರಾತರುದ್ರಲೀಲಾ ಪ್ರಸಂಗವು ಮಹಾಭಾರತದ ಅರಣ್ಯ ಪರ್ವದಲ್ಲಿ ಕಂಡುಬರುತ್ತದೆ.

ಪಂಪಭಾರತದಲ್ಲಿ ಇದನ್ನು ಈ ರೀತಿ ವರ್ಣಿಸಲಾಗಿದೆ.

"ವಚನರನಾಗಿ ಶಂಭು ಗಿರಿಜಾತೆಯನೋತು ಪುಳಿಂದಿ ಮಾಡಿ ನ
ಚ್ಚಿನ ಗುಹನ ಕಿರಾತಬಲ ನಾಯಕನಾಗಿರೆ ಮಾಡಿ ಭೂತ ಮು
ಳ್ಳನಿತುಮನೆಯ್ದೆ ಬೇಡವಡೆಮಾಡಿ ಯುಗಾಂತ ಪಯೋಧರಾಳಿ
ಭೋಂಕನೆ ಕವಿವಂದದಿಂ ಕವಿದನಾ ಬನಮಂ ಮೃಗಯಾ ನಿಧಾನಮಂ ॥"

ಈಶ್ವರ ತಾನು ಕಿರಾತ ವೇಷತೊಟ್ಟು ಪಾರ್ವತಿಗೆ ಪುಳಂದಿ ವೇಷ ತೊಡಿಸಿ ಅರ್ಜುನನ ಪರಾಕ್ರಮವವನ್ನು ಪರೀಕ್ಷಿಸಲು ಬರುವನು. ಕಾಡು ಬೇಡರೆಂದರೆ ಯುದ್ಧ ಪ್ರೀಯರು ಪ್ರಾಣಿಬೇಟೆಯಲ್ಲಿ ಆಸಕ್ತಿಯುಳ್ಳವರು ಶೌರ್ಯಪ್ರದರ್ಶನದಲ್ಲಿ ಹಂಬಲವುಳ್ಳವರು ಎಂಬುದನ್ನು ಈ ಮೇಲಿನ ಸಾಲುಗಳು ಹೇಳುತ್ತವೆ.

"ಕನ್ನಡ ಪ್ರಾಚೀನ ಕೃತಿಯಾದ 'ವಡ್ಡಾರಾಧನೆ'ಯಲ್ಲೂ ಈ ಜನಾಂಗಕ್ಕೆ ಸಂಬಂಧಿಸಿದ ಉಲ್ಲೇಖಗಳನ್ನು ಕಾಣಬಹುದು. ಇದರಲ್ಲಿಯ 'ಚಿಲಾತಪುತ್ರನ' ಕಥೆ ಒಂದು. ಚಿಲಾತಪುತ್ರ ಎಂಬುದು ಸಂಸ್ಕೃತದ 'ಕಿರಾತಪುತ್ರ' ಎಂಬುದರ ಪ್ರಾಕೃತ ರೂಪವೆಂದು ವಿದ್ವಾಂಸರು ನಿರ್ಧರಿಸಿದ್ದಾರೆ. ಅದೇ ಗ್ರಂಥದ 'ವಿದ್ಯೊಚ್ಚೋರನೆಂಬ ರಿಷಿಯ ಕಥೆ'ಯಲ್ಲಿಯ ಮದಂಡನೆಂಬ 'ತಳವಾರ'ನ ಉಲ್ಲೇಖವಿದೆ. ತಳವಾರ, ಬೇಡಜನಾಂಗದ ಒಂದು ಉಪಪಂಗಡ ಆಗಿದೆ. ಇಲ್ಲಿ 'ತಳವಾರ' ಎಂದರೆ ನಗರ ರಕ್ಷಕನಾದ ಅಧಿಕಾರಿ. ಇದೇ ರೀತಿ 'ಸುಕುಮಾರ ಸ್ವಾಮಿಯ ಕಥೆ'ಯಲ್ಲಿ ಬರುವ ಸುಧಾಮೆಯ ಉಪಕಥೆಯಲ್ಲಿಯೂ 'ತಳವಾರ'ನ ಉಲ್ಲೇಖವಿದೆ. ಇದರಿಂದ ಕನ್ನಡ ವಡ್ಡಾರಾಧನೆಗೆ ಮೂಲ ಗ್ರಂಥವಾಗಿರುವ ಭಗವತೀ ಆರಾಧನೆಯ ಕಾಲಕ್ಕಾಗಲೇ ಈ ಜನಾಂಗವನ್ನು ಕುರಿತಂತೆ ಉಲ್ಲೇಖ ಕಂಡುಬರುತ್ತದೆ. ಮತ್ತು ೬೩ ಮಂದಿ ಪುರಾತನರಲ್ಲಿ ಬೇಡರ ಕಣ್ಣಪ್ಪನೂ ಒಬ್ಬ. ಈತ ಕಾಳಹಸ್ತಿಯಲ್ಲಿ ಶ್ರೀ ಕಾಳಹಸ್ತೀಶ್ವರನನ್ನು ಪೂಜಿಸಿ ಪ್ರಸಿದ್ಧನಾದವನು.[೬]

ನಾಗವರ್ಮನ ಕರ್ನಾಟಕ ಕಾದಂಬರಿಯಲ್ಲಿ ಬೇಡರ ಬೇಟೆಯ ವರ್ಣನೆಯನ್ನು ಚಿತ್ರಿಸಿದ್ದಾನೆ ಮತ್ತು ಕೇಶಿರಾಜನು ತನ್ನ ಶಬ್ದಮಣಿದರ್ಪಣದಲ್ಲಿ ಷಷ್ಠಿ ವಿಭಕ್ತಿಗೆ ಉದಾಹರಣೆಯಾಗಿ ಕೊಟ್ಟಿರುವ ಪದ್ಯದಲ್ಲಿ ಮಾನವ ಸಂಬಂಧದ ಭಾವನೆಗಳನ್ನು ವ್ಯಕ್ತಪಡಿಸಿದ್ದಾನೆ. ದುರ್ಗಸಿಂಹನ ಪಂಚತಂತ್ರದ ಕತೆಯಲ್ಲಿ ಬೇಡರ ಆಶ್ರಮದ ಗಿಳಿಯ ನಡುವಳಿಕೆಯನ್ನು ಕುರಿತು ವಿವರಿಸುತ್ತದೆ. ೧೨ನೇ ಶತಮಾನದಲ್ಲಿ ಆಗಿಹೋದ ಶರಣರಲ್ಲಿ ಕೆಲವರಾದರೂ ಈ ಜನಾಂಗದವರಿರಬೇಕು ಎಂದು ತೋರುತ್ತದೆ. ಸೋಮಾಸಿಮಾರ, ಕಂಗುಲಿಯ ಕಲಿಯರು, ಇರಿಭಕ್ತ, ಕನ್ನಣ್ಣ (ಬೇಡರ ಕಣ್ಣಪ್ಪ) ಬೇಡರ ಜನಾಂಗಕ್ಕೆ ಸೇರಿದವರೆಂದು ಊಹಿಸಲಾಗಿದೆ.

ಬೇಡ ಜನಾಂಗದ ಬಗ್ಗೆ ಶಾಸನಗಳಿಂದ ಮಾಹಿತಿ ಸಿಗುವುದು ಬಹಳ ಕಡಿಮೆ ಅಪರೂಪವಾಗಿ ಸಿಗುವ ೭ನೇ ಶತಮಾನದಲ್ಲಿ ಇವರಿಗೆ ಪ್ರತ್ಯೇಕ ರಾಜ್ಯಗಳೇ ಇದ್ದವೆಂದು 'ಗದ್ದೆಮನೆ ಶಾಸನ'ದಿಂದ ತಿಳಿದುಬರುತ್ತದೆ. ಈ ಶಾಸನದಲ್ಲಿ ಸ್ವಸ್ತಶ್ರೀ ಶೀಲ ಆದಿತ್ಯನ್ ದಿಶಾವನ್ ಭಾರ್ಗವನ್ ಅಗ್ಗಳ ಕಣ್ಣನ್ ಪೇರಾಳ್ಕೆವರೆ ಪಟ್ಟಣಿ ಸತ್ಯಾಂಕನ್ ಅಟ್ಟಳ್ಳಭಟನ್ ಬೆದರೆ ಮಹೇನ್ದ್ರನ್ ಬೇಡರಾಯ ಮಲಪ್ಪರ್ ಕಳೆಗದುಳೆವಿರಿದು

ಸ್ವರ್ಗಾಲಯಕ್ಕೇರೆದನ್'' ಎಂದು ಬೇಡರ ಸಾಹಸವನ್ನು ಕುರಿತು ಹೇಳುತ್ತದೆ''[೭] ಇದರಲ್ಲಿ 'ಬೇಡರಾಯ' ಎಂದರೆ ಬೇಡರರಾಜ ಎಂಬ ಸ್ಪಷ್ಟ ನಿದರ್ಶನವಿದೆ.

ತದನಂತರ ಅನೇಕ ಅರಸು ಮನೆತಗಳಲ್ಲಿ ಕಂಡುಬರುವ ಕಂಪ್ಲಿ ರಾಜ್ಯದ ಕಂಪಿಲರಾಯ ಹಾಗೂ ಇವನ ಮಗ ಕುಮಾರರಾಮನು ಕೂಡ ಬೇಡ ಜನಾಂಗಕ್ಕೆ ಸಂಬಂಧಿಸಿದವರಾಗಿದ್ದಾರೆ. ಅಲ್ಲದೆ ಅನೇಕ ಪಾಳೇಗಾರರೂ ಈ ಜನಾಂಗದಲ್ಲಿದ್ದರೆಂಬುದಕ್ಕೆ ನಿದರ್ಶನಗಳುಂಟು. ''ಕಂಪಿಲರಾಯ ಎನ್ನುವ ಹೆಸರೇ ಒಂದು ವಿಶೇಷ ಎನಿಸುತ್ತದೆ. ಬೇಡರು ತಮ್ಮ ಯಾವುದೇ ಒಂದು ಗುಂಪನ್ನು ಕಂಪಣ ಅಥವಾ ಕಂಪಳ ಎಂದು ಕರೆದುಕೊಳ್ಳುತ್ತಾರೆ. ಚೆಳ್ಳಕೆರೆ ತಾಲೂಕು ನಾಯಕನಹಟ್ಟಿ ಬಖೈರಿನಲ್ಲಿ ಹಟ್ಟಿ ನಾಯಕರು ಆಂಧ್ರದ ಕಡೆಯ ಶ್ರೀಶೈಲದಿಂದ ಬಂದವರು ಎಂಬ ಸಂಗತಿಯನ್ನು ಹೇಳುವಲ್ಲಿ ''ಗುರು ಗುಹೇಶ್ವರನ ಬೆಟ್ಟಕ್ಕೆ ಪೂರ್ವಭಾಗ ಯೇಳು ಜಂಬ್ಬೀ ಜನ್ನಿಗೆ ಹಳ್ಳಿಯಿವಗಳ ಮಧ್ಯದಲ್ಲೂಯಾ ಕಂಪಳಕ್ಕೆ ಹಟ್ಟೆಯಿಟ್ಟುಕೊಂಡು ೧೨ ಪೆಟ್ಟಿಗೆ ದೇವರುಗಳು ಸಹ ಇದ್ದರು'' ಎಂಬ ವಾಕ್ಯ ಬರುತ್ತದೆ. ಹಾಗೆ ನೋಡಿದರೆ ಆಂಧ್ರದ ಕಡೆಯಿಂದ ಕರ್ನಾಟಕಕ್ಕೆ ಬಂದ ಬೇಡನಾಯಕರಲ್ಲಿ ಕಂಪಿಲರಾಯನ ಪೂರ್ವಜರದು ಒಂದು ಗುಂಪು ಇದ್ದಿರಬಹುದು ಎಂದು ಹೇಳಲಾಗಿದೆ.''[೮]

ವಿಜಯನಗರ ಸಾಮ್ರಾಜ್ಯ ಕಾಲಕ್ಕೆ ಬೇಡನಾಯಕರೇ ಹೆಚ್ಚಾಗಿ ಸೈನಿಕ ಹುದ್ದೆಗಳನ್ನು ಹೊಂದಿದ್ದರು. ವಿಜಯನಗರದ ಪತನಾನಂತರ ಕರ್ನಾಟಕದ ಪ್ರಮುಖ ಪಾಳೇಗಾರರಾಗಿ ಚಿತ್ರದುರ್ಗದಲ್ಲಿಯೂ ಆಳ್ವಿಕೆ ನಡೆಸಿದರು.

ಈ ಬೇಡ ಜನಾಂಗವು ವೃತ್ತಿಯ ವೈವಿಧ್ಯತೆಯಿಂದಾಗಿ ಮತ್ತು ಇತರೇ ಕಾರಣಗಳಿಂದಾಗಿ ವಿಭಜನೆಯಾಗಿ ಕಾಡಿನಲ್ಲಿ ವಾಸವಾಗಿದ್ದು, ತಮ್ಮ ಮೂಲ ವೃತ್ತಿ ಬೇಟೆ ಮತ್ತು ಪಶುಪಾಲನೆ ಮಾಡುವವರು ಮ್ಯಾಸನಾಯಕರಾದರು. ನಾಯಕತ್ವವನ್ನು ವಹಿಸಿಕೊಂಡವರು ಪಾಳೆಯಗಾರರು ಅಥವಾ ದೊರೆಗಳಾದರು. ನಗರ ಪ್ರದೇಶದಲ್ಲಿ ವಾಸಿಸುವರು ಊರ ನಾಯಕರಾದರೂ ಎಲ್ಲಾರೂ ಒಂದೇ ಮೂಲದಿಂದ ಬಂದವರು. ಆದರೆ ತಮ್ಮ ಕಸುಬಿಗನುಸಾರವಾಗಿ ಬೇರೆ ಬೇರೆ ರೀತಿಯಿಂದ ಜೀವನ ನಡೆಸುತ್ತಿದ್ದಾರೆ.

ಕ್ರಿ.ಶ. ೧೮೦೦ರಲ್ಲಿ ಭಾರತಕ್ಕೆ ಆಗಮಿಸಿದ ವಿದೇಶಿ ವಿದ್ವಾಂಸ ಬುಖಾನನು ಬೇಡರ ಕುರಿತು ಈ ರೀತಿ ಹೇಳಿದ್ದಾನೆ. ''ಚಿತ್ರದುರ್ಗ ಜಿಲ್ಲೆಯ ಉತ್ತರದಿಕ್ಕಿನ ಗುಡ್ಡಗಾಡು ತೀರದ ಪ್ರದೇಶದಲ್ಲಿ ವ್ಯವಸಾಯಕ್ಕಾಗಿಯೇ ಸೀಮಿತವಾದ ಪ್ರದೇಶಗಳಲ್ಲಿ ಬೇಟೆಯಾಡುವ ಬೇಡರು ವಾಸಿಸುತ್ತಿದ್ದರು. ಟಿಪ್ಪುವಿನ ಕಾಲಕ್ಕೆ ಅವರು ಸೇನೆಯಲ್ಲಿದ್ದು, (೧೨ ಪಗೋಡಗಳ) ಪಗಾರವನ್ನು ಹೊಂದಿದ್ದರು ಎಂದು ಹೇಳುತ್ತಾನೆ''[೯]

ಈ ಬೇಡರು ತಮ್ಮನ್ನು ಬ್ಯಾಡರು, ವಾಲ್ಮೀಕಿಗಳು, ಪರಿವಾರದವರು, ಮ್ಯಾಸಬೇಡರು (ಮ್ಯಾಸ ನಾಯಕರು), ತಳವಾರರು, ನಾಯಕರು, ಪಾಳೆಯಗಾರರು ಎಂದು ನಾನಾ ಹೆಸರುಗಳಲ್ಲಿ ಕರೆದುಕೊಳ್ಳುತ್ತಾರೆ. ತೆಲುಗಿನಲ್ಲಿ ಇವರನ್ನು 'ಬೋಯ ಅಥವಾ ಬೇಡರು' ಎಂದು ಗುರುತಿಸುತ್ತಾರೆ.

## ಮ್ಯಾಸನಾಯಕರು

ನಾಯಕ ಜನಾಂಗದ ಉಪಪಂಗಡಗಳಲ್ಲಿ ಮ್ಯಾಸನಾಯಕ ಜನಾಂಗವು ಒಂದು. ಅವರ ಮೂಲವೃತ್ತಿ ಬೇಟೆ ಮತ್ತು ಪಶುಪಾಲನೆ. ಇವರ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನ ವಿಶೇಷವಾಗಿ ಕಂಡುಬರುತ್ತದೆ. ಮ್ಯಾಸ ಪದದ ನಿಷ್ಪತ್ತಿಯ ಬಗ್ಗೆ ಕೆಲವು ಉಲ್ಲೇಖಗಳನ್ನು ನೀಡಬಹುದು.

"ಮ್ಯಾಸ ಪದವು 'ವ್ಯಾಸ' ಎಂಬ ಪದದಿಂದ ಬಂದಿರಬಹುದು. ಆದ್ದರಿಂದ ತಾವು ವ್ಯಾಸ ಮಹಾಕವಿಯ ಕುಲದವರೆಂದು ಹೇಳಿಕೊಳ್ಳುವರು ಮತ್ತು ಮ್ಯಾಸ, ಮೇಸ, ಮೇಷ ಮುಂತಾದ ರೂಪಗಳು 'ಮ್ಲೇಚ್ಛ' ಎಂಬ ಸಂಸ್ಕೃತಿ ಪದದ ತದ್ಭವಗಳಾಗಿವೆ. ಇದೇ ಪ್ರಾಕೃತದಲ್ಲಿ ಮೇಸ - ಮೇಷ"[೧೦] ಎಂದಾಗುತ್ತದೆ.

ಕೆಲವು ಬೇಡ ಜನಾಂಗದ ಹಿರಿಯ ವಕ್ತೃಗಳು ಮ್ಯಾಸ ಪದವನ್ನೂ ಮೇಯಿಸುವರು ಪದದಿಂದ ಬಂದಿದೆಯೆಂದು ಹೇಳಿಕೊಳ್ಳುವುದುಂಟು. ಇದಕ್ಕೆ ಆಧಾರವೆಂದರೆ ಬೇಡನಾಯಕರ ವೃತ್ತಿ ಪಶುಪಾಲನೆಯಾಗಿರುವುದು. ಇದನ್ನೇ ಆಧರಿಸಿ ಎಂ.ಜಿ.ಈಶ್ವರಪ್ಪನವರು 'ಮ್ಯಾಸರು' ಎಂಬ ಪದ ದನ ಮೇಯಿಸುವವರು ಎಂಬ ಪದದಿಂದಲೇ ಬಂದಿರಬಹುದೆಂಬುದನ್ನು ಸೈನಿಕರಾಗಿ ಅಥವಾ ಮೀಸಲೂ ಪಡೆಯವರಾಗಿ ವಿಜಯನಗರದ ರಾಜ ಮಹಾರಾಜರುಗಳ ಆಳ್ವಿಕೆಯಡಿ ಇದ್ದುದರಿಂದ ಮೀಸಲು ನಾಯಕರು ಅಥವಾ ಮ್ಯಾಸನಾಯಕರಾದರು ಎಂಬ ಸಾಧ್ಯತೆಯನ್ನು ಕುರಿತು ತಮ್ಮ 'ಮ್ಯಾಸ ಬೇಡರು' ಪುಸ್ತಕದಲ್ಲಿ ಹೇಳುತ್ತಾರೆ.

ಈ ಜನಾಂಗದ ಮೂಲದ ಬಗ್ಗೆ ಒಂದು ಪೌರಾಣಿಕ ಹೇಳಿಕೆ ಹೀಗಿದೆ. "ಒಬ್ಬ ಬೇಡರ ಜಾತಿಯ ಹೆಣ್ಣಿಗೆ ಇಬ್ಬರು ಗಂಡುಮಕ್ಕಳಿದ್ದರು. ಹಿರಿಯವನು ಊಟವಾದ ಮೇಲೆ ಹೊಲಕ್ಕೆ ಹೋಗಿದ್ದನು. ಚಿಕ್ಕವನು ಮನೆಗೆ ಬಂದು ತಾಯಿಯನ್ನು ಊಟಕ್ಕೆ ಕೇಳಿದಾಗ ತಾಯಿಯು ರೊಟ್ಟಿ ಹಾಗೂ ತರಕಾರಿಯನ್ನು ನೀಡಿದಳು. ಊಟ ಮಾಡುತ್ತಿರುವವನಿಗೆ ಮಾಂಸದ ವಾಸನೆ ಬಂದಿತು. ಆಗ ತಾಯಿಯನ್ನು ಕೇಳಿದ. ತಾಯಿ ಮಾಂಸವನ್ನು ಕೊಡದಿದ್ದಾಗ ಸಿಟ್ಟಿಗೆದ್ದ ಮಗ ಅವಳನ್ನು ಕೊಂದು ಹಾಕಿದನು. ಆನಂತರ ಅವನು ಮನೆಯಲ್ಲಿ ಹುಡುಕಿದಾಗ ಒಂದು ಗಡಿಗೆ ಸಿಕ್ಕಿತು. ಅದನ್ನು ತೆಗೆದು ನೋಡಿದಾಗ ಅದರಲ್ಲಿ ಕೊಳತು ನಾರುವ ಒಂದು ಬೇರು ಸಿಕ್ಕಿತು. ಅದಕ್ಕೆ ಮಾಂಸದ ವಾಸನೆಯಿತ್ತು. ಇದನ್ನರಿತ ಅವನು ತನ್ನ ಮುಂಗೋಪಿತನಕ್ಕೆ ವ್ಯಥೆಪಟ್ಟು ಅಡವಿಗೆ ಹೋಗಿ ತಪಸ್ಸಿಗೆ ಕುಳಿತನು. ಕಠಿಣ ತಪಸ್ಸಿನಿಂದ ಋಷಿಯ ಹಂತಕ್ಕೇರಿದ ಈತನೇ 'ಮ್ಯಾಸನಾಯಕ' ಜನಾಂಗದ ಮೂಲಪುರುಷ"ನಾದನು. [೧೧]

ಪ್ರಚಲಿತವಿರುವ ಜನಪದ ಕತೆಯೊಂದರ ಪ್ರಕಾರ "ಈ ಮ್ಯಾಸ ಬ್ಯಾಡರು ಮತ್ತು ಕಾಡುಗೊಲ್ಲರು ಎಂದು ಕರೆಯಲ್ಪಡುವ ಇವರು ಒಂದೇ ತಾಯಿಯ ಮಕ್ಕಳಂತೆ ಇಬ್ಬರೂ ಗೋಪಾಲಕರಾಗಿದ್ದರು. ಬರ ಬಂದಾಗ ದನಗಳನ್ನು ಪಡವಲ ಸೀಮೆಗೆ ತಿರುಗಿಸಿದರು. ಬಹಳಷ್ಟು ದಿನಗಳಿಂದ ಆಹಾರವಿಲ್ಲದೆ ಹಸಿವಿನಿಂದ ಕಂಗೆಟ್ಟಿದ್ದವನು ತಡೆಯಲಾರದೆ ಆಗ ತಾನೇ ಈದ (ಜನನವಾದ) ಕುಂಟ ಆಕಳು ಕರುವಿನ ತೊಡೆಯನ್ನು ಕಿತ್ತುಕೊಂಡು ತಿಂದನಂತೆ. ಇದನ್ನು ನೋಡಿದ ದೊಡ್ಡವನು 'ಅಯ್ಯೊ, ಕಂಕಾ (ಅನಾಗರೀಕ) ಎಂಥಾ ಕೆಲಸ

ಮಾಡಿದಿಯೋ ಎಂದು ಬಯ್ದನಂತೆ. ಅಂದಿನಿಂದ ಅವರು ಬೇರೆಯಾದರಂತೆ. 'ಕಂಕಾ' ಎಂದು ಕರೆಯಲ್ಪಟ್ಟವನು ಮುಂದೆ 'ಮ್ಯಾಸ ನಾಯಕ' ನೆನೆಸಿಕೊಂಡನಂತೆ. ಉಳಿದವನು ತನ್ನ ಗೊಲ್ಲ ತನವನ್ನು ಹಾಗೇ ಉಳಿಸಿಕೊಂಡನಂತೆ."[೧೨]

"ಇವರು ಮೂಲತಃ ಆಂಧ್ರಪ್ರದೇಶದ ಶ್ರೀಶೈಲದ ಬಳಿಯ ಕರಿಮಲೆ - ಕೊಮ್ಮಮಲೆಗಳ ಕಡೆಯಿಂದ ಮತ್ತು ತಿರುಪತಿ ಬಳಿಯ ಜಡೇಕಲ್ಲುದುರ್ಗದ ಕಡೆಯಿಂದ ವಲಸೆ ಬಂದ ಜನ. ಮೂಲತ: ಬೇಟೆಗಾರರು, ಪಶುಪಾಲಕರೂ ಆದ ಈ ಜನ ಹುಲ್ಲು ನೀರು ಹುಡುಕುತ್ತಾ ದೇಶಾಂತರ ಬಂದವರು. ಮುಖ್ಯವಾಗಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ನಂತರ ಕರ್ನಾಟಕದತ್ತ ವಲಸೆ ಬರತೊಡಗಿದ ಈ ಜನ ವೀರಯೋಧರಾಗಿದ್ದರು. ಯುದ್ಧ ಪ್ರೇಮಿಗಳಾಗಿದ್ದರು. ಹೀಗಾಗಿ ಇವರಿಗೆ ಸಮಾಜದಲ್ಲಿ ಹೆಚ್ಚಿನ ಸ್ಥಾನಗಳು ಸಹಜವಾಗಿ ದೊರೆತವು."[೧೩]

ಮ್ಯಾಸನಾಯಕರನ್ನು ಇತರೆ ಬುಡಕಟ್ಟುಗಳಿಗೆ ಹೋಲಿಸಿದರೆ, ಭಿನ್ನವಾಗಿರುವ ಕೆಲವು ಅಂಶಗಳನ್ನು ಸ್ಪಷ್ಟವಾಗಿ ಕಾಣಬಹುದು. ಅನೇಕ ಬುಡಕಟ್ಟುಗಳು ಇಂದೂ ತಮ್ಮ ಮೂಲ ಆಚರಣೆಗಳನ್ನು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬಂದಿದ್ದಾರೆ. ಈ ಜನಾಂಗದವರ ಬೆಡಗು-ಗೋತ್ರಗಳು ಮತ್ತು ಕೌಟುಂಬಿಕ ವೈವಾಹಿಕ ಸಂಬಂಧಗಳು ಮತ್ತು ವಿಧಿ ನಿಷೇಧಗಳು ತುಂಬಾ ವಿಶಿಷ್ಟವಾಗಿವೆ. ಇವರು ಇತರೆ ಜನಾಂಗದ ಬಹುತೇಕ ಹಬ್ಬಗಳನ್ನು ಆಚರಿಸುವುದರೊಂದಿಗೆ ಕೆಲ ಹಬ್ಬಗಳನ್ನು ತುಂಬಾ ವಿಶಿಷ್ಟವಾಗಿ ಆಚರಿಸುತ್ತಾರೆ. ಧಾರ್ಮಿಕ ಆಚರಣೆಗಳು ಸಂಸ್ಕಾರದ ವಿಧಿ ವಿಧಾನಗಳಲ್ಲಿನ ಆಚರಣೆಗಳು ಅಚ್ಚರಿ ಹುಟ್ಟಿಸುವಂತಹವುಗಳಾಗಿವೆ. ತಮ್ಮದೇ ಆದ ನ್ಯಾಯಪದ್ಧತಿಯ ಕಟ್ಟೆಮನಿ ಮತ್ತು ಮ್ಯಾಸ ಮಂಡಲಗಳನ್ನು ಹೊಂದಿದ್ದಾರೆ. ಇವರು ಮೂಲದಲ್ಲಿ ಒಂದೇ ಬುಡಕಟ್ಟಿಗೆ ಸೇರಿದ ಜನಾಂಗವಾಗಿದ್ದರೂ ಕ್ರಮೇಣ ಅನೇಕ ಉಪ ಪಂಗಡಗಳಾಗಿ ವಿಭಜನೆಗೊಂಡಿರುತ್ತಾರೆ. ಎಲ್ಲಾ ಉಪಪಂಗಡಗಳಿಗಿಂತ ಮ್ಯಾಸನಾಯಕ ಉಪಪಂಗಡವು ತನ್ನ ಮೂಲ ವಿಶಿಷ್ಟತೆಯನ್ನು ಉಳಿಸಿಕೊಂಡು ಬಂದಿದೆ.

ಭಾಷೆಗೆ ಸಂಬಂಧಿಸಿದಂತೆ ಹೇಳುವುದಾದರೆ ಇವರ ಮನೆ ಮಾತು ತೆಲುಗು. ಈ ಜನಾಂಗದ ಚರಿತ್ರೆಗೆ ಸಂಬಂಧಿಸಿದ ಹೆಚ್ಚಿನ ದಾಖಲೆಗಳು ತೆಲುಗಿನಲ್ಲಿ ಸಿಗುತ್ತವೆ. ಹಲವಾರು ಶತಮಾನಗಳಿಂದ ಇವರು ಕನ್ನಡದ ಪ್ರದೇಶದಲ್ಲಿ ವಾಸವಾಗಿರುವುದರಿಂದ ಇವರು ತೆಲುಗು, ಕನ್ನಡ ಎರಡೂ ಭಾಷೆಗಳೂ ಬಲ್ಲವರಾಗಿದ್ದಾರೆ. ಇತ್ತೀಚಿನ ರಾಜಕೀಯ, ಸಾಮಾಜಿಕ ಒತ್ತಡಗಳಿಂದ ಇವರು ತೆಲುಗು ಭಾಷೆಯಿಂದ ಕನ್ನಡಕ್ಕೆ ಹೆಚ್ಚಾಗಿ ವಾಲುತ್ತಿರುವುದನ್ನು ನೋಡಬಹುದು. ಹಾಗಂತ ತೆಲುಗು ಭಾಷೆಯನ್ನು ಸಂಪೂರ್ಣವಾಗಿ ತ್ಯಜಿಸಿಲ್ಲ. ಕೆಲವು ಆವರಣಗಳಲ್ಲಿ ತೆಲುಗು ಭಾಷೆಯ ಸಂಗೋಪನೆಯೂ ಮಾಡುತ್ತಿದ್ದಾರೆ. ಈ ಎರಡು ಭಾಷೆಗಳನ್ನು ಬಳಸುವ ಇವರಲ್ಲಿ ತೆಲುಗು ಮಿಶ್ರಿತ ಕನ್ನಡ ವಿಶಿಷ್ಟವಾಗಿ ವಿಶೇಷವಾಗಿ ಮತ್ತು ವಿಚಿತ್ರವಾಗಿ ಬಳಕೆಯಾಗುತ್ತದೆ. ಆದ್ದರಿಂದಲೇ ಈ ವಿಷಯಕ್ಕೆ ಸಂಬಂಧಿಸಿದಂತೆ ವಿಷಯ ಆರಿಸಿಕೊಳ್ಳಲಾಗಿದೆ.

## ೪. ಭಾಷಿಕ ಪರಿಸರ

ಕನ್ನಡ ಮತ್ತು ತೆಲುಗು ಭಾಷೆಗಳು ದ್ರಾವಿಡ ಭಾಷಾವರ್ಗಕ್ಕೆ ಸೇರಿದವುಗಳು. ಕನ್ನಡ ದಕ್ಷಿಣ ದ್ರಾವಿಡ ಭಾಷಾವರ್ಗಕ್ಕೆ ಸೇರಿದ ಭಾಷೆ. ತೆಲುಗು ಮಧ್ಯ ದ್ರಾವಿಡ ಭಾಷಾವರ್ಗಕ್ಕೆ ಸೇರಿದ ಭಾಷೆಯಾಗಿದೆ. ಕರ್ನಾಟಕದಲ್ಲಿ ಕನ್ನಡ ಮತ್ತು ಉರ್ದುಭಾಷೆಗಳು ಬಹುಸಂಖ್ಯಾತರ ಭಾಷೆಯಾಗಿದೆ. ಹಾಗೆಯೇ ಬಹುಸಂಖ್ಯಾತರಾಡುವ ಭಾಷೆಯಾಗಿ ತೆಲುಗು, ಮೂರನೇ ಸ್ಥಾನ ಪಡೆದುಕೊಂಡಿದೆ. ತೆಲುಗು ಭಾಷೆಯನ್ನು ಕರ್ನಾಟಕದ ಗಡಿ ಜಿಲ್ಲೆಗಳಲ್ಲಿ ಹೆಚ್ಚು ಬಳಸುವವರು ಇದ್ದಾರೆ. ಕರ್ನಾಟಕದಲ್ಲಿ ತೆಲುಗು ಭಾಷೆ ಕೋಲಾರ ಜಿಲ್ಲೆಯಲ್ಲಿ ಬಹುಸಂಖ್ಯಾತರಾಡುವ ಭಾಷೆಯಾಗಿದೆ. ಕರ್ನಾಟಕದ ಇತರೆ ಪ್ರದೇಶಗಳಲ್ಲಿ ಬಳಕೆಯಾಗುವ ತೆಲುಗು ಪ್ರಮಾಣವನ್ನು ಕೋಷ್ಟಕ - ೧ರಲ್ಲಿ ವಿವರ ನೀಡಲಾಗಿದೆ. ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನಲ್ಲಿ ಹೆಚ್ಚಾಗಿ ತೆಲುಗು ಭಾಷೆಯನ್ನು ಬಳಸುವ ಬುಡಕಟ್ಟು ಜನಾಂಗವನ್ನು ಗುರುತಿಸಬಹುದಾಗಿದೆ.

ಭಾರತದಲ್ಲಿ ಹಿಂದಿ ಭಾಷೆಯ ನಂತರ ಬಹುಸಂಖ್ಯಾತರಿಂದ ಬಳಕೆಯಾಗುತ್ತಿರುವ ಭಾಷೆಯೆಂದರೆ ತೆಲುಗು. ಚಾರಿತ್ರಿಕವಾಗಿ ಅಧ್ಯಯನ ಮಾಡಿದಾಗ ತೆಲುಗು ಮತ್ತು ಕನ್ನಡ ಭಾಷೆಗಳು ರಚನೆಯಲ್ಲಿ ಸಮಾನತೆಗಳು ಹೆಚ್ಚು. ಮೊಳಕಾಲ್ಮೂರು ತಾಲೂಕು ಪ್ರದೇಶದಲ್ಲಿ ನೆಲೆಸಿರುವ ಎಲ್ಲಾ ಜನಾಂಗಗಳಿಗೆ ತೆಲುಗುಭಾಷೆಯ ಪರಿಚಯವಿದ್ದರೂ ವಿಶೇಷವಾಗಿ ತೆಲುಗು ಭಾಷೆ ಬುಡಕಟ್ಟು ಸಮುದಾಯವಾದ ಮ್ಯಾಸನಾಯಕರಲ್ಲಿ ಹೆಚ್ಚಾಗಿ ಬಳಕೆಯಾಗುತ್ತದೆ. ಇವರು ಕೌಟುಂಬಿಕ ವಲಯದಲ್ಲಿ ತೆಲುಗುಭಾಷೆಯನ್ನು ಬಳಸುತ್ತಾರೆ. ವ್ಯವಹಾರಿಕ ವಲಯದಲ್ಲಿ ಕನ್ನಡ ಭಾಷೆಯನ್ನು ಬಳಸುತ್ತಾರೆ. ವ್ಯವಹಾರಿಕ ವಲಯಗಳಾದ, ಸಾರ್ವಜನಿಕ ಸ್ಥಳಗಳು, ಆಫೀಸು, ಶಾಲಾ ಕಾಲೇಜುಗಳು, ಮಾರುಕಟ್ಟೆಗಳಲ್ಲಿ, ಸಿನಿಮಾಮಂದಿರ, ಆಟದ ಮೈದಾನ, ಹೋಟೆಲ್ ಮುಂತಾದವುಗಳಲ್ಲಿ ಪ್ರಾದೇಶಿಕ ಭಾಷೆ ಕನ್ನಡವಾಗಿರುವದರಿಂದ ಕನ್ನಡ ಭಾಷೆಯನ್ನು ಬಳಸುತ್ತಾರೆ. ಅಂತಹ ಸಂದರ್ಭದಲ್ಲಿ ಮ್ಯಾಸನಾಯಕರು ಬಳಸುವ ಕನ್ನಡ ಮಾತಿನಲ್ಲಿ ತೆಲುಗು ಭಾಷೆಯ ಉಚ್ಚಾರಣೆ, ಶಬ್ದಕೋಶ ವ್ಯಾಕರಣ ವಿಚಾರಗಳು ಸ್ಪಷ್ಟವಾಗಿ ಕಾಣಬಹುದು.

ಮೊಳಕಾಲ್ಮೂರು ತಾಲೂಕಿನಲ್ಲಿ ನೆಲೆಸಿರುವ ಈ ಮ್ಯಾಸನಾಯಕರು ದ್ವಿಭಾಷಿಕರು. ಹಾಗಾಗಿ ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ವ್ಯವಹಾರ ಮಾಡುವ ಸಾಮರ್ಥ್ಯ ಹೊಂದಿದ್ದಾರೆ. ಈ ಸಮುದಾಯವು ಮೂಲತಃ ಬುಡಕಟ್ಟು ಜನಾಂಗವಾಗಿದ್ದು, 'ಆಂಧ್ರಪ್ರದೇಶದ ಶ್ರೀಶೈಲ ಪರ್ವತದ ಕರಿಮಲೆ - ಕೊಮ್ಮಮಲೆಗಳ ಕಡೆಯಿಂದ ಮತ್ತು ತಿರುಪತಿಯ ಜಡೇಕಲ್ಲು ದುರ್ಗದ ಕಡೆಯಿಂದ ವಲಸೆ ಬಂದಂತಹ ಜನಾಂಗ. ಅಲ್ಲಿಂದ ಬರುವ ಸಮಯದಲ್ಲಿ ಅಲ್ಲಿನ ಭಾಷೆಯೊಂದಿಗೆ ಬಂದು ಈ ಪ್ರದೇಶದಲ್ಲಿ ನೆಲೆಗೊಂಡಿರಬಹುದು ಎಂದು ಹೇಳಲಾಗಿದೆ. ಮೊಳಕಾಲ್ಮೂರು ಪ್ರದೇಶವು ವಿಜಯನಗರ ಸಾಮ್ರಾಜ್ಯದ ವ್ಯಾಪ್ತಿಗೆ ಒಳಪಟ್ಟಿತ್ತು. ವಿಜಯನಗರ ಸಾಮ್ರಾಜ್ಯ ದಲ್ಲಿ ಹೆಚ್ಚಾಗಿ ಸೈನಿಕರು ಬೇಡನಾಯಕರಾಗಿದ್ದರು. ಇಲ್ಲಿಯ ಅರಸರ ಮೇಲೆ ತೆಲುಗಿನ ಪ್ರಭಾವ ದಟ್ಟವಾಗಿ ಕಂಡುಬರುತ್ತದೆ.

"ವಿಜಯನಗರದ ಪ್ರಾರಂಭಕಾಲದ ರಾಜರುಗಳ ಆಳ್ವಿಕೆಯ ಕಾಲದಲ್ಲಿ ತೆಲುಗು ಮಾತನಾಡುವ ಪ್ರದೇಶವು ಕನ್ನಡ ಮಾತನಾಡುವ ಪ್ರದೇಶಗಳು ನಿಕಟ ಸಂಪರ್ಕ ಹೊಂದಿದ್ದವು. ಅದರ ರಾಜಧಾನಿಯು ದ್ವಿಭಾಷಾ ಪ್ರದೇಶದಲ್ಲಿ ನೆಲೆಗೊಂಡಿತ್ತು. ವಿಜಯನಗರ ಸಾಮ್ರಾಜ್ಯದಲ್ಲಿ ಅರ್ಧದಷ್ಟು ಭಾಗವು ತೆಲುಗು ಮಾತನಾಡುವ ಪ್ರದೇಶಗಳಿಂದ ಕೂಡಿತ್ತಾದರೂ ವಿಜಯನಗರದ ಮೊದಲನೆಯ ರಾಜವಂಶವು ಕನ್ನಡ ವಿದ್ವಾಂಸರಿಗೆ ಆಶ್ರಯ ನೀಡಿತ್ತೆಂದು" ಕೆ.ಈಶ್ವರದತ್ತ ಅವರು ತಮ್ಮ 'ವಿಜಯನಗರ ಸಾಮ್ರಾಜ್ಯದ ಕಾಲದ ತೆಲುಗು ಸಾಹಿತ್ಯ' ಸಂ, ದೀಕ್ಷಿತ್ (೧೯೯೧ : ೧೪೭) ಎಂಬ ಲೇಖನದಲ್ಲಿ ಹೇಳಿದ್ದಾರೆ.[೧೪]

ವಿಜಯನಗರದ ಕಾಲದಿಂದಲೇ ಈ ಸಮುದಾಯದ ಮೇಲೆ ತೆಲುಗಿನ ಪ್ರಭಾವ ಬೀರಿದೆ ಎಂದು ಹೇಳಲಾಗುವದು. ಮುಂದೆ ಇದು ರಾಯದುರ್ಗದ ಸೀಮೆಯ ಆಳ್ವಿಕೆಗೆ ಒಳಪಟ್ಟಿತು. ಮೊಳಕಾಲ್ಮೂರು ತಾಲೂಕು ಆಂಧ್ರಪ್ರದೇಶದ ಗಡಿಭಾಗದಲ್ಲಿರುವದರಿಂದ ತೆಲುಗು ಭಾಷೆಯ ಪ್ರಭಾವ ಬೀರಿದೆ ಎಂದು ಗುರುತಿಸಬಹುದು. ಈ ಸಮುದಾಯದವರ ವೈವಾಹಿಕ ಸಂಬಂಧಗಳು ಸಹ ಇವರ ಭಾಷೆಯ ಮೇಲೆ ಪ್ರಭಾವ ಬೀರಿರಬೇಕು.

ಬಿ.ವಿ.ವೀರಭದ್ರಪ್ಪನವರು "ಆಂಧ್ರಕ್ಕೆ ಹೊಂದಿಕೊಂಡ ಮೊಳಕಾಲ್ಮೂರು ಮತ್ತು ಚಳ್ಳಕೆರೆ ತಾಲೂಕುಗಳಲ್ಲಿ ತೆಲುಗು ಭಾಷೆಯನ್ನಾಡುವವರ ಸಂಖ್ಯೆ ಗಣನೀಯವಾಗಿದ್ದರೂ, ಅವರೆಲ್ಲರೂ ದ್ವಿಭಾಷಿಗಳು. ತೆಲುಗು ಮಾತನಾಡುವವರೂ ಶಾಲೆಯಲ್ಲಿ ಕನ್ನಡವನ್ನೇ ಕಲಿಯುತ್ತಾರೆ. ಈ ಪ್ರದೇಶದ ಜನರ ರೀತಿ - ನೀತಿಗಳು ಆಚಾರ ವಿಚಾರಗಳು ಮತ್ತು ಆಡುಭಾಷೆ ವಿಶಿಷ್ಟವಾಗಿದೆ. ಈ ಭಾಗಗಳ ಕನ್ನಡವು ಅನೇಕ ತೆಲುಗು ಪದಗಳಿಂದ ಕೂಡಿಕೊಂಡು, ತೆಲುಗು ಭಾಷೆಯ ಪ್ರಭಾವಕ್ಕೆ ಒಳಗಾಗಿದೆ ಎಂದು ಹೇಳುತ್ತಾರೆ."[೧೫]

ಕೋಷ್ಟಕ - ೧

## ಕರ್ನಾಟಕದ ಇತರೆ ಜಿಲ್ಲೆಗಳಲ್ಲಿ ತೆಲುಗು ಭಾಷೆಯ ಬಳಕೆಯ ಪ್ರಮಾಣ

| ಜಿಲ್ಲೆಗಳು | ತೆಲುಗು |
|---|---|
| 1. ಬೀದರ್ | + |
| 2. ಗುಲ್ಬರ್ಗ | + |
| 3. ಬಿಜಾಪುರ | - |
| 4. ಬೆಳಗಾವಿ | - |
| 5. ರಾಯಚೂರು | + |
| 6. ಬಳ್ಳಾರಿ | ++ |
| 7. ಕೊಪ್ಪಳ | - |
| 8. ಬಾಗಲಕೋಟೆ | - |
| 9. ಗದಗ | - |
| 10. ಚಿತ್ರದುರ್ಗ | ++ |
| 11. ತುಮಕೂರು | ++ |
| 12. ಕೋಲಾರ | +++ |
| 13. ಬೆಂಗಳೂರು ಉತ್ತರ | ++ |
| 14. ಬೆಂಗಳೂರು ದಕ್ಷಿಣ | + |
| 15. ಮೈಸೂರು | + |
| 16. ದಾವಣಗೆರೆ | + |
| 17. ಕೊಡಗು | + |
| 18. ಚಾಮರಾಜ ನಗರ | + |
| 19. ದಕ್ಷಿಣ ಕನ್ನಡ | - |
| 20. ಉತ್ತರ ಕನ್ನಡ | - |
| 21. ಶಿವಮೊಗ್ಗ | - |
| 22. ಮಂಡ್ಯ | + |
| 23. ಹಾಸನ | - |
| 24. ಚಿಕ್ಕಮಗಳೂರು | - |
| 25. ಧಾರವಾಡ | - |
| 26. ಉಡುಪಿ | - |
| 27. ಹಾವೇರಿ | - |

+++ ಹೆಚ್ಚು ++ಸಾಧಾರಣ + ಕಡಿಮೆ - ಇಲ್ಲ

(ಕೃಪೆ : ಕರ್ನಾಟಕ ಭಾರತಿ, ೧೯೭೭, ವಿಶೇಷ ಸಂಚಿಕೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ)

**ಅಡಿಟಿಪ್ಪಣಿ**

೧. ಕೆ.ಎನ್.ಭೀಮಾರೆಡ್ಡಿ, ಮೊಳಕಾಲ್ಮೂರು ತಾಲೂಕು ದರ್ಶನ, ೧೯೮೭, ಪು. ೬

೨. ಕೃಷ್ಣಮೂರ್ತಿ ಹನೂರು, ಮ್ಯಾಸಬೇಡರ ಸಂಸ್ಕೃತಿ, ೧೯೯೩, ಪು. ೫೩

೩. ಕೆ.ಎಂ.ಮೈತ್ರಿ, ಬುಡಕಟ್ಟು ಕುಲಕಸಬುಗಳು, ೨೦೦೨, ಪು. ೧೮೮

೪. ಕರಿಶಟ್ಟಿ ರುದ್ರಪ್ಪ, ಮ್ಯಾಸನಾಯಕರು ಒಂದು ಜನಾಂಗಿಕ ಅಧ್ಯಯನ, ೧೯೯೫, ಪು. ೧೧

೫. ಕೃಷ್ಣಮೂರ್ತಿ ಹನೂರು, ಮ್ಯಾಸಬೇಡರ ಸಂಸ್ಕೃತಿ, ೧೯೯೩, ಪು. ೨೮

೬. ಲಕ್ಷ್ಮಣ ತೆಲಗಾವಿ, ಹರಿತಿಸಿರಿ, ೧೯೭೬, ಪು. ೩೨೭

೭. ಅದೇ, ಪು. ೩೨೮

೮. ಕೃಷ್ಣಮೂರ್ತಿ ಹನೂರು, ಮ್ಯಾಸಬೇಡರ ಸಂಸ್ಕೃತಿ, ೧೯೯೩, ಪು. ೩೫

೯. ಕರಿಶಟ್ಟಿ ರುದ್ರಪ್ಪ, ಮ್ಯಾಸನಾಯಕರು ಒಂದು ಜನಾಂಗಿಕ ಅಧ್ಯಯನ, ೧೯೯೫, ಪು. ೧೫

೧೦. ಅದೇ, ಪು. ೨೩-೨೪

೧೧. ಅದೇ, ಪು. ೨೪

೧೨. ಮೀರಸಾಬಿಹಳ್ಳಿ ಶಿವಣ್ಣ, ಗೊಲ್ಲಕಡಗ, ೧೯೯೯, ಪು. ೮೮

೧೩. ಅದೇ, ಪು. ೮೬

೧೪. ಎಂ.ಭಾಗ್ಯಲಕ್ಷ್ಮಿ, ಬಳ್ಳಾರಿ ಪರಿಸರದ ಕನ್ನಡ-ತೆಲುಗು ದ್ವಿಭಾಷಿಕತೆ : ಸಾಮಾಜೋಭಾಷಿಕ ಅಧ್ಯಯನ (ಪಿಎಚ್.ಡಿ. ಮಹಾಪ್ರಬಂಧ, ಅಪ್ರಕಟಿತ), ೨೦೦೨, ಪು. ೭೨

೧೫. ಎಂ.ಎಸ್.ಸುಂಕಾಪುರ, ಕರ್ನಾಟಕ ಭಾರತಿ ತ್ರೈಮಾಸಿಕ ಸಂಚಿಕೆ, ೧೯೭೬, ಪು. ೨೫೫

❖❖

# ೩

# ಮ್ಯಾಸನಾಯಕರ ಭಾಷೆ

೧. ಪ್ರವೇಶ

೨. ಕೌಟುಂಬಿಕ ವಲಯ

ಅ. ಸಂಬಂಧವಾಚಕಗಳು

೧. ರಕ್ತಸಂಬಂಧದ ಸಂಬಂಧ ವಾಚಕಗಳು

೨. ವೈವಾಹಿಕ ಸಂಬಂಧದ ಅಥವಾ ಇತರೆ ಸಂಬಂಧದ ಸಂಬಂಧ ವಾಚಕಗಳು

೩. ಕುಟುಂಬದ ಅವಳಿ ಸಂಬಂಧಗಳು

ಆ. ಸಂಬೋಧನಾ ರೂಪಗಳು

೧. ಹಿರಿಯರು ಕಿರಿಯರಿಗೆ ಬಳಸುವ ಸಂಬೋಧನಾ ರೂಪಗಳು

೨. ಕಿರಿಯರು ಹಿರಿಯರಿಗೆ ಬಳಸುವ ಸಂಬೋಧನಾ ರೂಪಗಳು

೩. ವ್ಯಕ್ತಿನಾಮಗಳೊಂದಿಗೆ ಸಂಬೋಧಿಸುವ ಕ್ರಮ

೪. ಸ್ಥಳನಾಮಗಳೊಂದಿಗೆ ಸಂಬೋಧಿಸುವ ಕ್ರಮ

೫. ಗುಣವಿಶೇಷಣಗಳೊಂದಿಗೆ ಸಂಬೋಧಿಸುವ ಕ್ರಮ

೩. ವ್ಯವಹಾರಿಕ ವಲಯ

೧. ಶಾಲಾ ಕಾಲೇಜುಗಳಲ್ಲಿ ಭಾಷಾ ಬಳಕೆ

೨. ಮಾರುಕಟ್ಟೆಗಳಲ್ಲಿ ಭಾಷಾ ಬಳಕೆ

೩. ಸಂಬೋಧನಾ ರೂಪಗಳು

# ೩

# ಮ್ಯಾಸನಾಯಕರ ಭಾಷೆ

## ೧. ಪ್ರವೇಶ

'ಭಾಷೆ' ಒಂದು ಸಾಮಾಜಿಕ ಪ್ರಕ್ರಿಯೆ. ಸಾಮಾಜಿಕ ಶ್ರೇಣಿ, ಕಾಲ, ದೇಶ, ಪರಿಸರಕ್ಕನುಗುಣವಾಗಿ ಅಭಿವ್ಯಕ್ತಿ ಮಾಧ್ಯಮವಾಗಿ ನಿಲ್ಲಬಲ್ಲ ಸಮರ್ಥ್ಯ ಸಾಧನ. ಸಮಾಜದಲ್ಲಿ ಮಾನವನ ವೈಯಕ್ತಿಕ ಸಿದ್ಧಿ-ಸಾಧನೆಗಳಲ್ಲಿ 'ಭಾಷಾ ಸಿದ್ಧಿ' ವಿಶಿಷ್ಟ ಹಾಗೂ ಗುರುತರವಾದದು. ಮನುಷ್ಯನ ದೈನಂದಿನ ಪ್ರತಿಯೊಂದು ವ್ಯವಹಾರದಲ್ಲೂ ಭಾಷೆಯ ಪಾತ್ರ ಮಹತ್ವದ್ದು. ಭಾಷೆ ಉಸಿರಿನಷ್ಟೇ ಸಹಜ. ವ್ಯಕ್ತಿಯ ಬೌದ್ಧಿಕ ಚಟುವಟಿಕೆ, ಅನಿಸಿಕೆ, ಅನುಭವ, ಭಾವನೆ ಹಾಗೂ ಪ್ರತಿಕ್ರಿಯೆಗಳನ್ನು ಯುಕ್ತ ರೀತಿಯಲ್ಲಿ ಸಂವಹನಗೊಳಿಸುವ ಮಾಧ್ಯಮ. ವ್ಯಕ್ತಿಯ ಸಾಮಾಜಿಕ, ಸಾಂಸ್ಕೃತಿಕ, ಔದ್ಯೋಗಿಕ, ಪ್ರಾದೇಶಿಕ ವೈಶಿಷ್ಟ್ಯಗಳನ್ನು ಗುರುತಿಸುವುದು ವ್ಯಕ್ತಿಯಾಡುವ ಮಾತಿನಿಂದಲೇ. ಜಗತ್ತಿನಲ್ಲಿ ಭಾಷೆಯಿಲ್ಲದ ಸಮಾಜವಿಲ್ಲವಾದ್ದರಿಂದ ಭಾಷೆಯೊಂದನ್ನು ಬಳಸದ ಮಾನವ ಸಮುದಾಯವನ್ನು ಕಾಣುವುದು ಅಸಾಧ್ಯ. ಒಂದು ಪ್ರದೇಶದ ಭಾಷಾ ಬಳಕೆ ಆ ಪ್ರದೇಶದ ಸಾಮಾಜಿಕ ಸ್ಥಿತಿಗತಿಗಳನ್ನು ಅವಲಂಬಿಸಿರುತ್ತದೆ.

"ಸಮಾಜ ಮತ್ತು ಭಾಷೆ ಇವೆರಡರ ಆಂತರಿಕ ಸಂಬಂಧ ವಿಶಿಷ್ಟವಾದುದು. ಭಾಷೆಯಿಂದ ಸಮಾಜದ ರಚನಾ ವ್ಯವಸ್ಥೆಯನ್ನು ಬಹು ಸುಲಭವಾಗಿ ಅರಿಯಬಹುದು. ಸಮಾಜದಲ್ಲಿ ವ್ಯಕ್ತಿ ತನ್ನಷ್ಟಕ್ಕೆ ಸರ್ವಸ್ವತಂತ್ರನಾಗಿರದೆ ಆಯಾ ಸಮುದಾಯದ ಅವಿಚ್ಛಿನ್ನ ಘಟಕವಾಗಿರುವನು. ವ್ಯಕ್ತಿಯನ್ನು ಸಮಾಜದಿಂದ ಬೇರ್ಪಡಿಸಲಾಗದು ಮತ್ತು ವ್ಯಕ್ತಿಯಿಂದ ಭಾಷೆಯನ್ನು ಬೇರ್ಪಡಿಸಲಾಗದು. "ಭಾಷೆ ಸಮಾಜದ ಎಲ್ಲ

ಚಟುವಟಿಕೆಯ ಕೇಂದ್ರ. ಸಮಾಜದ ಬೆಳವಣಿಗೆಗೆ ಹಾಗೂ ಬದಲಾವಣೆಗೆ ಭಾಷೆ ಅನಿವಾರ್ಯ. ಭಾಷೆಯನ್ನು ಸಮಾಜದ ಹಿನ್ನೆಲೆಯಲ್ಲಿ ಗಮನಿಸದೆ ಅಧ್ಯಯನ ಮಾಡಿದರೆ ಭಾಷೆಯ ಸಂಪೂರ್ಣ ವೈಜ್ಞಾನಿಕ ವಿಶ್ಲೇಷಣೆ ಮಾಡಿದಂತಾಗುವುದಿಲ್ಲ"[೧] ಎಂಬ ಪೀಟರ್ ಟ್ರಡ್ಜಿಲ್ (೧೯೭೪) ಅವರ ಅಭಿಪ್ರಾಯ ಭಾಷೆ ಮತ್ತು ಸಮಾಜದ ಗಾಢ ಸಂಬಂಧ ಮತ್ತು ಮಹತ್ವವನ್ನು ಸ್ಪಷ್ಟಪಡಿಸುವುದು ಈ ಅಧ್ಯಾಯದಲ್ಲಿ ಪ್ರಯತ್ನಿಸಲಾಗಿದೆ.

ಸಮಾಜದಲ್ಲಿ ಒಂದೊಂದು ಸಮುದಾಯಕ್ಕೆ ಭಾಷಾ ಭಿನ್ನತೆಯನ್ನು ಗುರುತಿಸಬಹುದು. ಅಂತಹ ಸಮುದಾಯಗಳಲ್ಲಿ ಬುಡಕಟ್ಟು ಜನಾಂಗವಾದ ಮ್ಯಾಸನಾಯಕ ಸಮುದಾಯದ ಭಾಷೆ ವೈವಿಧ್ಯತೆಯಿಂದ ಕೂಡಿದೆ. ಮೊಳಕಾಲ್ಮೂರು ಪ್ರದೇಶದಲ್ಲಿ ನೆಲೆಸಿರುವ ಈ ಸಮುದಾಯದವರ ಕೌಟುಂಬಿಕ ವಲಯದಲ್ಲಿನ ಭಾಷೆ ತೆಲುಗು ಆಗಿದೆ. ಮತ್ತು ವ್ಯವಹಾರಿಕ ವಲಯದ ಭಾಷೆ, ಪ್ರಾದೇಶಿಕ ಭಾಷೆಯಾದ ಕನ್ನಡವಾಗಿದೆ, ಇವರ ಕೌಟುಂಬಿಕ ವಲಯದದಲ್ಲಿ ಬಳಕೆಯಾಗುವ ತೆಲುಗು ಭಾಷೆ ಶಿಷ್ಟ ತೆಲುಗುಗಿಂತ ಭಿನ್ನವಾಗಿ ಕಂಡುಬರುತ್ತದೆ. ಈ ಭಾಷೆಯ ಮೇಲೆ ಪ್ರಾದೇಶಿಕ ಭಾಷೆಯಾದ ಕನ್ನಡದ ಪ್ರಭಾವ ಬೀರಿ, ಕನ್ನಡ ಮಿಶ್ರಿತ ತೆಲುಗು ಭಾಷೆಯಾಗಿದೆ ಎಂದು ಗುರುತಿಸಬಹುದು. ಈ ಪ್ರದೇಶದಲ್ಲಿ ಈ ಜನಾಂಗ ವಲಸೆ ಬಂದು ಹಲವು ಶತಮಾನಗಳ ಕಾಲ ನೆಲೆಗೊಂಡಿದ್ದರೂ ಸಹ ತಮ್ಮ ಮಾತೃಭಾಷೆಯ ಮೂಲ ಸೊಗಡನ್ನು ಕೆಲವು ಆವರಣಗಳಲ್ಲಿ ಕಾಪಾಡಿಕೊಂಡು ಬಂದಿರುವದನ್ನು ಕಾಣಬಹುದು.

ಮ್ಯಾಸನಾಯಕರ ಭಾಷೆಯು 'ಕನ್ನಡ ಮಿಶ್ರಿತ ತೆಲುಗು' ಅಥವಾ 'ತೆಲುಗು ಮಿಶ್ರಿತ ಕನ್ನಡ' ಭಾಷೆಯಾದ ಕಾರಣ ಇವರ ಭಾಷೆಯನ್ನು ಸಾಮಾಜಿಕ ಉಪಭಾಷೆಯೆಂದೂ ಗುರುತಿಸಬಹುದು. ಕೌಟುಂಬಿಕ ವಲಯದ ಆವರಣದಲ್ಲಿ ಭಾಷೆಯು ಬಹಳ ವಿಶಿಷ್ಟವಾಗಿ ಬಳಕೆಯಾಗುತ್ತದೆ. ಸಂಬಂಧವಾಚಕಗಳು, ಸಂಬೋಧನಾರೋಪಗಳು ಮಾತೃಭಾಷೆಯಾದ ತೆಲುಗಿನಿಂದ ಬಳಕೆಯಾಗಿ ವ್ಯವಹಾರಿಕ ವಲಯದ ಭಾಷೆಗಿಂತ ಭಿನ್ನವಾಗಿ ಬಳಕೆಯಾಗುತ್ತಿವೆ. ವ್ಯವಹಾರಿಕ ವಲಯದ ಆವರಣಗಳಾದ ಸಾರ್ವಜನಿಕ ಸ್ಥಳಗಳು, ಶಾಲಾ ಕಾಲೇಜುಗಳು, ಮಾರುಕಟ್ಟೆ, ಹೋಟೆಲುಗಳು, ಸರ್ಕಾರಿ ಕಛೇರಿಗಳಲ್ಲಿ, ಕನ್ನಡ ಭಾಷೆಯನ್ನು ಸ್ಪಷ್ಟವಾಗಿ ಬಳಸುತ್ತಾರೆ. ಆದರೆ ಆಚರಣೆ, ಪ್ರಾರ್ಥನೆ ಹಾಡು ಮುಂತಾದ ಕೌಟುಂಬಿಕ ಆವರಣದ ಒಳಗೆ ತೆಲುಗು ಸಂಗೋಪನೆಯಾಗುವುದನ್ನು ನೋಡಬಹುದಾಗಿದೆ.

### ೨. ಕೌಟುಂಬಿಕ ವಲಯ

ಸಮಾಜದ ಎಲ್ಲಾ ದ್ವಿಭಾಷಿಕ ಸಮುದಾಯಗಳ ಕೌಟುಂಬಿಕ ವಲಯದ ಭಾಷೆಯನ್ನು ವ್ಯವಹಾರಿಕ ವಲಯದ ಭಾಷೆಗಿಂತ ಭಿನ್ನವಾಗಿರುವುದನ್ನು ಗುರುತಿಸಬಹುದಾಗಿದೆ. ಅದೇ ರೀತಿಯಾಗಿ ಮೊಳಕಾಲ್ಮೂರು ಪ್ರದೇಶದಲ್ಲಿ ನೆಲೆಸಿರುವ ಮ್ಯಾಸನಾಯಕರ ಕೌಟುಂಬಿಕ ವಲಯದ ಭಾಷೆ ವ್ಯವಹಾರಿಕ ಭಾಷೆಗಿಂತ ಭಿನ್ನವಾಗಿದೆ. ವ್ಯವಹಾರಕ್ಕಾಗಿ ಇಲ್ಲಿನ ಪ್ರಾದೇಶಿಕ ಭಾಷೆಯನ್ನು ಬಳಕೆ ಮಾಡುತ್ತಾರೆ. ಇವರ ಕುಟುಂಬದಲ್ಲಿನ ಆಪ್ತರು ರಕ್ತ ಸಂಬಂಧಿಗಳು, ಬಂಧುಬಳಗದವರು ಜೊತೆ ಬಳಸುವ ಭಾಷೆ ತೆಲುಗು ಆಗಿದೆ. ಇವರ ತೆಲುಗು ಭಾಷೆಯಲ್ಲಿ

ಬಳಕೆಯಾಗುವ ಸಂಬಂಧವಾಚಕಗಳು ಸಂಬೋಧನಾ ರೂಪಗಳನ್ನು ಸಾಮಾಜಿಕ ಭಾಷಾಶಾಸ್ತ್ರದ ನೆಲೆಯಲ್ಲಿ ವಿಶ್ಲೇಷಿಸುವುದು ಇಲ್ಲಿನ ಮುಖ್ಯ ಉದ್ದೇಶಗಳಲ್ಲೊಂದಾಗಿದೆ.

**ಅ. ಸಂಬಂಧ ವಾಚಕಗಳು**

"ಭಾಷಿಕರಿಗೆ ಭಾಷೆಯನ್ನು ಬಳಸುವ ಹಲವು ಬಗೆಯ ಸಾಮಾಜಿಕ ಸಂಬಂಧಗಳಲ್ಲಿ ಬಂಧುತ್ವವೂ ಬಹುಮುಖ್ಯ ಪಾತ್ರವಹಿಸುತ್ತದೆ. ಇಂಗ್ಲಿಷಿನ Kniship ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ಬಂಧುತ್ವ' ಪದ ಬಳಕೆಯಲ್ಲಿದೆ. ಅದರರ್ಥ ರಕ್ತಸಂಬಂಧಿ ಕಳ್ಳುಬಳ್ಳಿ ನೆಂಟರು ಇತ್ಯಾದಿ. ವ್ಯಕ್ತಿಯು ಸಮಾಜ ಜೀವಿ, ಸಮುದಾಯ ಜೀವಿ. ಹಾಗಾಗಿ ಬಂಧು ಬಳಗವನ್ನು ಸುತ್ತಮುತ್ತಲಿನ ಜನರನ್ನು ತೊರೆದು ಒಂಟಿ ಜೀವನ ನಡೆಸಲು ಸಾಧ್ಯವಿಲ್ಲ. ಬಂಧುತ್ವ, ವ್ಯಕ್ತಿಗಳಿಗೆ ಊರುಗೋಲು ಇದ್ದಂತೆ 'ಒಂಟಿ ಬಾಳು ಬಾಳೆ? ಎಂಬ ಗಾದೆಯನ್ನು ನೆನೆಪಿಸಿಕೊಳ್ಳಬಹುದು. ಜೀವನದ ಅವಶ್ಯಕತೆಗಳನ್ನು ಪೂರೈಸಬೇಕಾದರೆ ವ್ಯಕ್ತಿ ಇತರರ ಮೇಲೆ ಅವಲಂಬಿಸಬೇಕಾಗುತ್ತದೆ. ಬಂಧುತ್ವ ಹುಟ್ಟಿನಿಂದಲೇ ಬರುವುದು. ಪಾಲಕರ ಪೋಷಕರ ಸಂಪರ್ಕದಿಂದ ಅದು ವೃದ್ಧಿಯಾಗುವುದು. ಕುಟುಂಬದ ಮೂಲ ಉದ್ದೇಶ ಸಂತಾನೋತ್ಪತ್ತಿಯ ಕಾರ್ಯ ಮಾತ್ರವಾಗಿರದೆ ಬಂಧುತ್ವವನ್ನು ಗೊತ್ತುಪಡಿಸುವುದೂ ಆಗಿದೆ. ಬಂಧುತ್ವವು ವಯಸ್ಸು ಲಿಂಗ ಜಾತಿ ಹಾಗೂ ಸಾಮಾಜಿಕ ವರ್ಗಗಳನ್ನು ಅವಲಂಬಿಸಿರುತ್ತದೆ. ವ್ಯಕ್ತಿಯ ವೈವಾಹಿಕ ಸಂಬಂಧವು ಕ್ರಮೇಣ ಸಾಮಾಜಿಕ ಬಂಧುತ್ವದೊಡನೆ ಸಮೀಕರಣಗೊಳ್ಳುತ್ತದೆ."[೨] ಸಂಬಂಧವಾಚಕಗಳ ಪರಿಕಲ್ಪನೆ ಮತ್ತು ಪರಿಭಾಷೆಗಳು ಭಿನ್ನ ಸಂಸ್ಕೃತಿಗಳಲ್ಲಿ ವೈವಿಧ್ಯಮಯವಾಗಿರುವ ಸಾಧ್ಯತೆಯಿದೆ. ಮ್ಯಾಸನಾಯಕ ಸಮುದಾಯವು ವೈವಿಧ್ಯಮಯವಾದ ಸಂಸ್ಕೃತಿಯನ್ನು ಒಳಗೊಂಡಿದೆ. ಈ ಸಮುದಾಯದಲ್ಲಿ ಅಭಿವ್ಯಕ್ತಿಗೊಳ್ಳುವ ಸಂಬಂಧ ವಾಚಕಗಳ ಸ್ವರೂಪ ಮತ್ತು ಬಳಕೆಯ ವಿಧಾನಗಳನ್ನು ಕುರಿತು ಇಲ್ಲಿ ಚರ್ಚಿಸಲಾಗುವುದು.

ಈ ಮ್ಯಾಸನಾಯಕ ಸಮುದಾಯದಲ್ಲಿನ ಸಂಬಂಧವಾಚಕಗಳನ್ನು ಜೈವಿಕ ಹಾಗೂ ರಾಚನಿಕ ಸ್ವರೂಪವನ್ನು ಅನುಲಕ್ಷಿಸಿ ಎರಡು ರೀತಿಯಲ್ಲಿ ವರ್ಗೀಕರಿಸಬಹುದು.

೧. ರಕ್ತಸಂಬಂಧದ - ಸಂಬಂಧವಾಚಕಗಳು

೨. ವೈವಾಹಿಕ ಸಂಬಂಧ ಅಥವಾ ಇತರ ಸಂಬಂಧದ - ಸಂಬಂಧವಾಚಕಗಳು

**೧. ರಕ್ತಸಂಬಂಧದ ಸಂಬಂಧವಾಚಕಗಳು**

ಹೆತ್ತ ತಂದೆ - ತಾಯಿ, ಅಣ್ಣ - ತಮ್ಮ, ಅಕ್ಕ - ತಂಗಿ, ದೊಡ್ಡಪ್ಪ, ಚಿಕ್ಕಪ್ಪ, ತಾತ ಮುಂತಾದವರಿಂದ ಉಂಟಾದ ಸಂಬಂಧವನ್ನು ರಕ್ತಸಂಬಂಧವೆಂತಲೂ ಮತ್ತು 'ಕಳ್ಳುಬಳ್ಳಿ' ಸಂಬಂಧವೆಂದು ಕರೆಯಲಾಗುವುದು. ಇಂತಹ ಸಂಬಂಧವಾಚಕಗಳಿಗೆ ಪ್ರಾಥಮಿಕ ಸಂಬಂಧವಾಚಕಗಳೆಂದು ಕರೆಯುತ್ತಾರೆ. ಮ್ಯಾಸನಾಯಕರ ಕೌಟುಂಬಿಕ ವಲಯದಲ್ಲಿನ ಸಂಬಂಧವಾಚಕಗಳ ಬಳಕೆಯು ತೆಲುಗು ಭಾಷೆಯಲ್ಲಿ ಕಂಡುಬರುತ್ತವೆ.

| ಶಿಷ್ಟ ಕನ್ನಡ | ಮ್ಯಾಸನಾಯಕರ ಕೌಟುಂಬಿಕ ಭಾಷೆ |
|---|---|
| ತಂದೆ | ಅಯ್ಯ |
| ತಾಯಿ | ಅಮ್ಮ / ಅವ್ವ |
| ಮಗ | ಕೊಡುಕು |
| ಮಗಳು | ಬಿಡ್ಡ / ಕೂತ್ರ |
| ಅಕ್ಕ | ಅಕ್ಕ |
| ತಂಗಿ | ತಂಗಿ |
| ತಾತ | ತಾತ |
| ಅಜ್ಜಿ | ಅಮ್ಮ / ಅಬ್ಬ |
| ಅಣ್ಣ | ಅನ್ನಾ |
| ತಮ್ಮ | ತಮ್ಮಡು |
| ದೊಡ್ಡಪ್ಪ | ಗೊಪ್ಪಯ್ಯ / ಪೆದ್ದಯ್ಯ |
| ಚಿಕ್ಕಪ್ಪ | ಸನ್ನಯ್ಯ |
| ಚಿಕ್ಕಮ್ಮ | ಸನ್ನಮ್ಮ |
| ದೊಡ್ಡಮ್ಮ | ಗೊಪ್ಪಮ್ಮ / ಗೊಪ್ಪವ್ವ |

ಮ್ಯಾಸನಾಯಕರಲ್ಲಿ ಸಂಬಂಧವಾಚಕಗಳು ಹೆಚ್ಚಾಗಿ ಮಾತೃಭಾಷೆಯಲ್ಲಿ ಬಳಕೆಯಾಗಿ, ಕೆಲವೊಂದು ಮಾತ್ರ ಕನ್ನಡದಲ್ಲಿ ಬಳಕೆಯಾಗುವುದನ್ನು ಕಾಣಬಹುದು.

ತಾಯಿ - ಅಮ್ಮ / ಅವ್ವ

ಅಜ್ಜಿ - ಅವ್ವ / ಅಬ್ಬ

ತಂಗಿ - ತಂಗಿ

'ತಾಯಿ' ಸಂಬಂಧವಾಚಕಕ್ಕೆ ಅಮ್ಮ ಮತ್ತು ಅವ್ವ ಎಂದು ಸಂಬೋಧಿಸಿ, ಅಜ್ಜಿಗೆ ಅವ್ವ ಮತ್ತು ಅಬ್ಬ ಎಂದು, 'ತಂಗಿ'ಗೆ 'ತಂಗಿ'ಯೆಂದು ಸಂಬೋಧಿಸುವದು ಕಂಡುಬರುತ್ತದೆ. ಅವ್ವ, ಅಬ್ಬ, ತಂಗಿ, ಪದಗಳು ಮೂಲತ: ಕನ್ನಡ ಪದಗಳಾಗಿವೆ. ಇವರ ತೆಲುಗು ಭಾಷೆಯ ಮೇಲೆ ಕನ್ನಡದ ಪ್ರಭಾವ ಬೀರಿರುವದನ್ನು ಕಾಣಬಹುದು.

ದೊಡ್ಡಪ್ಪ - ಗೊಪ್ಪಯ್ಯ

ದೊಡ್ಡಮ್ಮ - ಗೊಪ್ಪಮ್ಮ / ಗೊಪ್ಪವ್ವ

ಮ್ಯಾಸನಾಯಕರ ಭಾಷೆಯಲ್ಲಿ ದೊಡ್ಡಪ್ಪ ಮತ್ತು ದೊಡ್ಡಮ್ಮ ಸಂಬಂಧವಾಚಕಗಳಿಗೆ ಗೊಪ್ಪಯ್ಯ,

ಗೊಪ್ಪವ್ವ ಎಂದು ಸಂಬೋದಿಸುತ್ತಾರೆ. ತೆಲುಗಿನಲ್ಲಿ 'ಗೊಪ್ಪ' ಎಂದರೆ ಉತ್ತಮ, ಒಳ್ಳೆಯ ಎಂಬ ಅರ್ಥವನ್ನು ಕಾಣಬಹುದು. ಇಂತಹ ಪದವನ್ನು ಮ್ಯಾಸನಾಯಕರು ಸಂಬಂಧವಾಚಕಕ್ಕೆ ಸೇರಿಸಿಕೊಂಡು ಸಂಬೋಧನೆ ಮಾಡುತ್ತಾರೆ.

ಗೊಪ್ಪ + ಅಯ್ಯ = ಗೊಪ್ಪಯ್ಯ

ಗೊಪ್ಪ + ಅಮ್ಮ = ಗೊಪ್ಪಮ್ಮ

ಗೊಪ್ಪ + ಅತ್ತ = ಗೊಪ್ಪತ್ತ

ಮ್ಯಾಸನಾಯಕರಲ್ಲಿ ಇಂತಹ ಸಂಬಂಧವಾಚಕಗಳು ವಿಶೇಷವಾಗಿ ಬಳಕೆಯಾಗುತ್ತದೆ. ಕನ್ನಡದ 'ದೊಡ್ಡ' ಪದದ ಬದಲು 'ಗೊಪ್ಪ' ಎಂಬ ಪದವನ್ನು ಬಳಸುತ್ತಾರೆ. ಮೊಳಕಾಲ್ಮೂರು ಪ್ರದೇಶದ ದಕ್ಷಿಣ ಮತ್ತು ಪಶ್ಚಿಮ ಭಾಗದಲ್ಲಿರುವ ಇಂತಹ ಪದಗಳನ್ನು ಹೆಚ್ಚಾಗಿ ಪ್ರಯೋಗ ಮಾಡುತ್ತಾರೆ. ಉತ್ತರ ಮತ್ತು ಪೂರ್ವಕ್ಕೆ ಪೆದ್ದಯ್ಯ ಪೆದ್ದಮ್ಮ ಎಂದು ಸಂಬೋಧಿಸುತ್ತಾರೆ.

| ಶಿಷ್ಟ ಕನ್ನಡ | ಮ್ಯಾಸನಾಯಕರ ಕೌಟುಂಬಿಕ ಭಾಷೆ |
|---|---|
| ಚಿಕ್ಕ + ಅಪ್ಪ = ಚಿಕ್ಕಪ್ಪ | ಸನ್ನ + ಅಯ್ಯ = ಸನ್ನಯ್ಯ |
| ಚಿಕ್ಕ + ಅಮ್ಮ = ಚಿಕ್ಕಮ್ಮ | ಸನ್ನ + ಅಮ್ಮ = ಸನ್ನಮ್ಮ |

ಇಲ್ಲಿ ಕನ್ನಡದ 'ಚಿಕ್ಕ' ಪದದ ಬದಲು 'ಸನ್ನ' ಪದ ಬಳಕೆಯಾಗುವದನ್ನು ಕಾಣಬಹುದು. ಹಾಗೆಯೇ ಅಪ್ಪ ಪದದ ಬದಲು ಅಯ್ಯ ಪದ ಬಳಕೆಯಾಗಿದೆ.

**೨. ವೈವಾಹಿಕ ಸಂಬಂಧದ ಅಥವಾ ಇತರೆ ಸಂಬಂಧದ ಸಂಬಂಧವಾಚಕಗಳು**

ಅತ್ತೆ, ಮಾವ, ಭಾವ, ಮೈದುನ, ಸೊಸೆ, ಅತ್ತಿಗೆ, ಅಳಿಯ ಮುಂತಾದವರಿಂದ ಉಂಟಾದ ಸಂಬಂಧವನ್ನು ವಿವಾಹ ಸಂಬಂಧವೆಂತಲೂ ಮತ್ತು ಆನುಷಂಗಿಕ ಸಂಬಂಧವೆಂದು ಕರೆಯಲಾಗುವುದು. ಇಂತಹ ಸಂಬಂಧ ವಾಚಕಗಳು ಮ್ಯಾಸನಾಯಕರಲ್ಲಿ ಯಾವ ರೀತಿ ಬಳಕೆಯಾಗುತ್ತವೆ ಎಂಬುದನ್ನು ಗಮನಿಸಬಹುದು.

| ಶಿಷ್ಟ ಕನ್ನಡ | ಮ್ಯಾಸನಾಯಕರ ಭಾಷೆ |
|---|---|
| ಅತ್ತೆ | ಅತ್ತಾ / ಯತ್ತಾ |
| ಮಾವ | ಮಾಮ |
| ಅಳಿಯ | ಅಲ್ಲುಡು |
| ಮೈದುನ | ಮರ್ದಿ |
| ಭಾವ | ಭಾವ |
| ಗಂಡ | ಮೊಗುಡು |

| | |
|---|---|
| ಹೆಂಡತಿ | ಆಲು |
| ಸೋದರಮಾವ | ಮ್ಯಾನಮಾಮ |
| ಅತ್ತಿಗೆ | ವದಿನಾ |
| ಸೊಸೆ | ಕ್ಯಾಡಲು |

ಮ್ಯಾಸನಾಯಕರ ಕೌಟುಂಬಿಕ ವಲಯದಲ್ಲಿ ವಿವಾಹ ಸಂಬಂಧದಿಂದ ಉಂಟಾದ ಸಂಬಂಧವಾಚಕಗಳನ್ನು ಮಾತೃಭಾಷೆಯಲ್ಲಿ ಬಳಕೆಯಾಗುವದು ಕಂಡುಬರುತ್ತದೆ. ಕೆಲವೊಂದು ಸಂಬಂಧವಾಚಕಗಳು ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಒಂದೇ ರೀತಿಯಲ್ಲಿ ಪ್ರಯೋಗವಾಗುವದನ್ನು ಕಾಣಬಹುದು. ಉದಾ :

ಅತ್ತೆ - ಅತ್ತಾ

ಮಾವ - ಮಾವ

ಭಾವ - ಭಾವ

ಕನ್ನಡ ಮತ್ತು ತೆಲುಗು ಭಾಷೆಗಳು ದ್ರಾವಿಡಭಾಷಾವರ್ಗಕ್ಕೆ ಸೇರಿರುವದರಿಂದ ಕೆಲವೊಂದು ಸಂಬಂಧವಾಚಕಗಳು ಸಾಮ್ಯದಿಂದ ಉಳಿದುಕೊಂಡು ಬಂದಿವೆ.

ವಿವಾಹ, ರಕ್ತಸಂಬಂಧಗಳಿಂದ ಮತ್ತು ಆಪ್ತವಲಯಗಳಿಂದ ಉಂಟಾದ ಸಂಬಂಧವಾಚಕಗಳನ್ನು ಇತರೆ ಸಂಬಂಧವಾಚಕಗಳೆಂದು ಕರೆಯಲಾಗುತ್ತದೆ.

| **ಶಿಷ್ಟ ಕನ್ನಡ** | **ಮ್ಯಾಸನಾಯಕರ ಕೌಟುಂಬಿಕ ಭಾಷೆ** |
|---|---|
| ಮೊಮ್ಮಗ | ಮನಮುಗೊಡುಕು |
| ಮೊಮ್ಮಗಳು | ಮನುಮುರಾಲು / ಮನಮುಬಿಡ್ಡ |
| ಮುತ್ತಜ್ಜ | ಮುತ್ತಾತ |
| ಕಿರಿಮಗ | ಸನ್ನ ಕೊಡಕು |

ಮೇಲಿನ ಪಟ್ಟಿಯಲ್ಲಿ ಮೂರು ನಾಲ್ಕು ತಲೆಮಾರಿನ ಸಂಬಂಧವನ್ನು ಸೂಚಿಸುವ ಸಂಬಂಧವಾಚಕಗಳನ್ನು ಮ್ಯಾಸನಾಯಕರಲ್ಲಿ ಕಾಣಬಹುದು. ಇಂತಹ ಸಂಬಂಧವಾಚಕಗಳನ್ನು ವಿಭಾಜಕ ಪದಗಳೆಂದು ಕರೆಯಬಹುದು. ವಿಭಾಜಕ ಪದಗಳಿಗೆ ಆದಿ ಮತ್ತು ಅಂತ್ಯ ಪರಿಸರದಲ್ಲಿ ಅವಿಭಾಜಕ ಪದಗಳು ಬಂದು ಮೂರು ತಲೆಮಾರಿನ ಬಂಧುತ್ವ ಸೂಚಕ ಪದಗಳು ಸೃಷ್ಟಿಯಾಗುತ್ತವೆ. ಅಂತಹ ಸಾಧಿತ ರೂಪಗಳು ಭಾಷೆಯಲ್ಲಿ ಸ್ವತಂತ್ರವಾಗಿ ಬಂದರೆ ಬೇರೊಂದು ಅರ್ಥವನ್ನು ಕೊಡುತ್ತವೆ.

ಉದಾ : 'ಮುತ್ತ' ಎನ್ನುವದು ಬಂಧುತ್ವ ಪದಗಳಲ್ಲಿ ಸಾಧಿತರೂಪವು ಹೌದು. ಅವಿಭಾಜಕರೂಪವು ಹೌದು. 'ಮುತ್ತ' ಪದದ ಅಂತ್ಯ ಪರಿಸರಕ್ಕೆ ಬೇರೆ ಪ್ರಾಥಮಿಕ ಬಂಧುತ್ವ ಪದಗಳನ್ನು ಬೇರೆ ಸಾಧಿತ ರೂಪಗಳನ್ನು ಪಡೆಯಬಹುದು.

| ಶಿಷ್ಟ ಕನ್ನಡ | ಮ್ಯಾಸನಾಯಕರ ಕೌಟುಂಬಿಕ ಭಾಷೆ |
|---|---|
| ಮುತ್ತ + ಅಜ್ಜ = ಮುತ್ತಜ್ಜ | ಮುತ್ತ + ತಾತ = ಮುತ್ತಾತ |
| ಮುತ್ತ + ಅಜ್ಜಿ = ಮುತ್ತಜ್ಜಿ | ಮುತ್ತ + ಅವ್ವ = ಮುತ್ತವ್ವ |
| ಮೊಮ್ಮ + ಮಗಳು = ಮೊಮ್ಮಗಳು | ಮನಮ + ಬಿಡ್ಡ = ಮಾನಮುಬಿಡ್ಡ |
| ಮೊಮ್ಮ + ಮಗ = ಮೊಮ್ಮಗ | ಮನಮ + ಕೊಡಕು = ಮಾನಮಗೊಡಕು |

'ಮುತ್ತ' ಎನ್ನುವ ಸಾಧಿತ ರೂಪವು ಮ್ಯಾಸನಾಯಕರಲ್ಲಿ ಬಳಕೆಯಾಗುವದು ಕಂಡುಬರುತ್ತದೆ.

**೩. ಕುಟುಂಬದ ಅವಳಿ ಸಂಬಂಧಗಳು**

"ಭಾಷಾ ಸಮುದಾಯದಲ್ಲಿ ತಂದೆ - ತಾಯಿ, ಮಕ್ಕಳು, ಮೊಮ್ಮಕ್ಕಳು ಮತ್ತು ಅವರ ಆಶ್ರಿತರು ಹೀಗೆ ಬಂಧುಗಳ ಒಂದು ಗುಂಪಿಗೆ ಕುಟುಂಬವೆನ್ನಬಹುದು. ಸಾಮಾನ್ಯವಾಗಿ ಒಂದು ಕುಟುಂಬಕ್ಕೆ ಸೇರಿದ ಸದಸ್ಯರು ಒಂದೇ ಕಡೇ ವಾಸಿಸುವುದುಂಟು. ಕುಟುಂಬವು ತನ್ನದೇ ಆದ ಸಾಮಾಜಿಕ ಕಾರ್ಯಗಳನ್ನು ಹೊಂದಿದೆ. ಅವುಗಳಲ್ಲಿ ಮುಖ್ಯವಾಗಿ ಸಂಸ್ಕೃತಿಯ ವಿನಿಮಯ, ಸದಸ್ಯರ ಮೇಲೆ ನಿಯಂತ್ರಣ, ಸದಸ್ಯರ ಸಂರಕ್ಷಣೆ ಹಾಗೂ ಸದಸ್ಯರ ವ್ಯಕ್ತಿತ್ವದ ಬೆಳವಣಿಗೆ ಮುಂತಾದ ಕಾರ್ಯಗಳನ್ನು ನಿರ್ವಹಿಸುತ್ತದೆ. ಸಾಮಾಜಿಕ ರಚನೆಯಲ್ಲಿ ಕುಟುಂಬವು ಪ್ರಮುಖ ಪಾತ್ರ ವಹಿಸುತ್ತದೆ."[೩] ಕುಟುಂಬದಲ್ಲಿನ ಅವಳಿ ಸಂಬಂಧಗಳು ಅರ್ಥವಲಯದಲ್ಲಿ ವಿಭಿನ್ನವಾಗಿ ಬಳಕೆಯಾಗಿ, ಸಂಬಂಧವಾಚಕಗಳ ಬಳಕೆಯು ವೈವಿಧ್ಯತೆಯಿಂದ ಕೂಡಿರುವುದನ್ನು ಮ್ಯಾಸನಾಯಕರ ಭಾಷೆಯಲ್ಲಿ ನೋಡಬಹುದು. ಮೊಳಕಾಲ್ಮೂರು ಪ್ರದೇಶದ ಮ್ಯಾಸನಾಯಕ ಜನಾಂಗದ ಕೌಟುಂಬಿಕ ವಲಯದ ಭಾಷಿಕರ ಸಮಾಜೋಭಾಷಿಕ ಸಂಬಂಧವನ್ನು ಕುರಿತು ಚರ್ಚಿಸಲಾಗುವದು.

**ತಂದೆ / ತಾಯಿ - ಮಗ / ಮಗಳು**

ಸಾಮಾನ್ಯವಾಗಿ ಹೆತ್ತವರಿಗೆ ಮಾತ್ರ 'ತಂದೆ', 'ತಾಯಿ' ಎಂಬ ರೂಪಗಳು ಬಳಕೆಯಾಗುತ್ತವೆ. ಮ್ಯಾಸನಾಯಕರು ತಂದೆಗೆ 'ಅಯ್ಯ' ಎಂದು ತಾಯಿಗೆ ಅವ್ವ ಮತ್ತು ಅಮ್ಮ ಎಂದು ಸಂಬೋಧಿಸುವದು ಕಂಡುಬರುತ್ತದೆ. ಕನ್ನಡದ ಅಪ್ಪ ಎಂಬ ಪದವನ್ನು ಮ್ಯಾಸನಾಯಕರು ಸಂಬಂಧಸೂಚಕವನ್ನು ಬಳಕೆಮಾಡದೇ ಇದ್ದರೂ ಸಹ, ಅವರ ಹೆಸರಿನ ಕೊನೆಯಲ್ಲಿ ಬಳಕೆಯಾಗುತ್ತದೆ. ಉದಾ : ಕಲ್ಲ + ಅಪ್ಪ = ಕಲ್ಲಪ್ಪ

ಗಂಗ + ಅಪ್ಪ = ಗಂಗಪ್ಪ

ನಾಗ + ಅಪ್ಪ = ನಾಗಪ್ಪ

ನರಸ + ಅಪ್ಪ = ನರಸಪ್ಪ

ರಾಮ + ಅಪ್ಪ = ರಾಮಪ್ಪ

ಸಂಬೋಧನೆಯಲ್ಲಿ ಕನ್ನಡದ ಬಾರಪ್ಪ ಎಂಬ ಪದವನ್ನು ಮ್ಯಾಸನಾಯಕರು ದಾಪ್ಪ, ರಾಪ್ಪ, ದಾರಯ್ಯ

ಎಂದು ಸಂಬೋಧಿಸುತ್ತಾರೆ. ಅಯ್ಯಾ, ಅಮ್ಮ ಪದಗಳಿಗೆ ಇರುವ ಭಾವಸಂಪತ್ತು. ಕಳ್ಳ ಬಳ್ಳಿತನ ತಂದೆ ತಾಯಿ ಪದಗಳಿಗೆ ಇಲ್ಲವೆಂದು ಹೇಳಬಹುದು. ಅಪ್ಪ, ಅಮ್ಮ, ಇವುಗಳಿಂದಾದ ಸಾಧಿತರೂಪಗಳನ್ನು ನೋಡಿದಾಗ ಅವುಗಳ ಅರ್ಥವಲಯ ವಿಸ್ತಾರವಾಗುತ್ತದೆ. ಮ್ಯಾಸನಾಯಕರ ಮಾತೃಭಾಷೆಯಲ್ಲಿ 'ಅಯ್ಯ, ಅಮ್ಮ' ಸಾಧಿತರೂಪಗಳು ಬಳಕೆಯಾಗಿ ಅರ್ಥ ವಿಸ್ತಾರವಾಗುವದನ್ನು ನೋಡಬಹುದು.

| ಶಿಷ್ಟ ಕನ್ನಡ | ಮ್ಯಾಸನಾಯಕರ ಕೌಟುಂಬಿಕ ಭಾಷೆ |
|---|---|
| ಚಿಕ್ಕ + ಅಪ್ಪ = ಚಿಕ್ಕಪ್ಪ | ಸನ್ನ + ಅಯ್ಯ = ಸನ್ನಯ್ಯ |
| ಚಿಕ್ಕ + ಅಮ್ಮ = ಚಿಕ್ಕಮ್ಮ | ಸನ್ನ + ಅಮ್ಮ = ಸನ್ನಮ್ಮ |

ಮ್ಯಾಸನಾಯಕರು ತಾಯಿಯ ತಂಗಿ ಮತ್ತು ಚಿಕ್ಕಪ್ಪನ ಹೆಂಡತಿಗೆ 'ಸನ್ನಮ್ಮ' ಎಂದು ಸಂಬೋಧಿಸುವುದುಂಟು. ಮತ್ತು ಅಪ್ಪನ ತಮ್ಮನಿಗೆ 'ಸನ್ನಯ್ಯ' ಎಂದು ಸಂಬೋಧಿಸುತ್ತಾರೆ. ಇತ್ತೀಚೆಗೆ ವಿದ್ಯಾವಂತರಲ್ಲಿ ಫಾದರ್, ಮದರ್, ಆಂಟಿ, ಅಂಕಲ್ ಮುಂತಾದ ಪದಗಳಿಂದ ಸಂಬೋಧಿಸುವುದು ಕಂಡುಬರುತ್ತದೆ.

ಮಗ, ಮಗಳು, ಮೊಮ್ಮಗ, ಮೊಮ್ಮಗಳು ರೂಪಗಳು ಮ್ಯಾಸನಾಯಕರಲ್ಲಿ ಕೊಡಕು, ಬಿಡ್ಡ, ಮನಮಗೊಡುಕು, ಮನಮುರಾಲು, ಎಂಬ ಪದಗಳು ಬಳಕೆಯಾಗುತ್ತವೆ. ಈ ಪದಗಳು ಸಂಬೋಧನೆಯಲ್ಲಿ ಬಳಕೆಯಾಗುವದಿಲ್ಲ. ಇನ್ನೊಬ್ಬರಿಗೆ ಪರಿಚಯಿಸುವಾಗ ಮಾತ್ರ ಬಳಕೆಯಾಗುತ್ತವೆ. ತಂದೆ ತಾಯಿಗಳು, ತಮ್ಮ ಮಗ / ಮಗಳನ್ನು ಹೆಸರಿನಿಂದ ಕರೆಯುವದು ಮತ್ತು ಸಂಬೋಧಿಸುವದು ಕ್ಷೇತ್ರಕಾರ್ಯದಿಂದ ತಿಳಿದುಬಂದ ಮಾಹಿತಿಯಾಗಿದೆ. ಉದಾ :

ಮ್ಯಾ, ಬಾ ೧. ಪಾಪಮ್ಮ ನಿಡ್ಳು ತೆತ್ತ ಪೋಮ್ಮ.
ಕನ್ನಡ ೨. ಪಾಪಮ್ಮ ನೀರು ತಗೊಂಡ ಬಾ ಹೋಗಮ್ಮ.

ಮ್ಯಾ, ಬಾ ೧. ಅರುಣ ಶಾಲಕಿ ಜಲ್ದಿ ಪೋ.
ಕನ್ನಡ ೨. ಅರುಣ ಶಾಲೆಗೆ ಬೇಗ ಹೋಗು.

ಮ್ಯಾ, ಬಾ ೧. ಗಂಗಮ್ಮ ಸೇನಾಲಾನ ಏಮಿ ಬದಕುವುಂದಿ.
ಕನ್ನಡ ೨. ಗಂಗಮ್ಮ ಹೊಲದಲ್ಲಿ ಏನು ಕೆಲಸವಿದೆ.

ಮ್ಯಾ, ಬಾ ೧. ನರಸಣ್ಣ ರಾಂಪುರಂಕಿ ಆಸ್ಪತ್ರಕಿ ಪೋಯಾಡೆ
ಕನ್ನಡ ೨. ನರಸಣ್ಣ ರಾಂಪುರಕ್ಕೆ ಆಸ್ಪತ್ರೆಗೆ ಹೋಗಿದ್ದಾನೆ.

ಮೇಲಿನ ಉದಾಹರಣೆಗಳಿಂದ ತಮ್ಮ ಮಕ್ಕಳನ್ನು ಸಂಬೋಧಿಸುವ ಸಂದರ್ಭದಲ್ಲಿ ಸಂಬಂಧವಾಚಕಗಳನ್ನು ಬಳಸದೆ, ಹೆಸರುಗಳನ್ನು ಮತ್ತು ಸಂಬೋಧನಾ ರೂಪಗಳನ್ನು ಬಳಸುವದು ಕಂಡುಬರುತ್ತದೆ. ಸಂಬಂಧವಾಚಕಗಳ ಸಾಮಾಜಿಕ ಜನಜೀವನದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ.

**ಗಂಡ - ಹೆಂಡತಿ**

ಭಾಷಾ ಬಳಕೆಯಲ್ಲಿ ಗಂಡ ಹೆಂಡರು ಪರಸ್ಪರ ಮಾತನಾಡುವಾಗ ಪರಸ್ಪರರು ಹೆಸರನ್ನು ಹಚ್ಚಿ ಕರೆಯುವುದಿಲ್ಲ. ಒಂದು ವೇಳೆ ಹೆಸರಿಡಿದು ಕರೆದರೆ ಆಯುಷ್ಯ ಕಡಿಮೆಯಾಗುತ್ತದೆಂಬ ನಂಬಿಕೆಯಿದೆ. ಮ್ಯಾಸನಾಯಕರಲ್ಲಿ ಗಂಡ, ಹೆಂಡತಿ ಸಂಬಂಧವಾಚಕಗಳಿಗೆ ಮೊಗುಡು ಮತ್ತು ಆಲು ಎಂದು ಕರೆಯುತ್ತಾರೆ. ಇವರು ಇತ್ತೀಚೆಗೆ ಕನ್ನಡ ಭಾಷಿಕರ ಜೊತೆ ಇರಬೇಕಾದ ಸಂದರ್ಭವಿದ್ದಾಗ ಗಂಡ ಹೆಣ್ತಿ ಎಂದು ಸಂಬೋಧಿಸುತ್ತಾರೆ. ಹೆಂಡತಿಯು ಗಂಡನ ಬಗೆಗೆ ಹೇಳುವಾಗ 'ಮಾವಾತಿನಿ' ಮಾಯಾಜಮಾನಾಡು, 'ನಾ ಮೊಗಡು' ಎಂದು ಸಂಬೋಧಿಸುವುದುಂಟು. ಮತ್ತು ಗಂಡ ತನ್ನ ಹೆಂಡತಿಯ ಬಗೆಗೆ ಹೇಳುವ ಸಂದರ್ಭದಲ್ಲಿ 'ನಾಯಲು', 'ಮಾ ಆವಿಡಾ' ಎಂದು ಸಂಬೋಧಿಸುತ್ತಾರೆ.

೧. ಗಂಡನು ಹೆಂಡತಿಯನ್ನು ಸಂಬೋಧಿಸುವ ಸಂದರ್ಭದಲ್ಲಿ 'ಎಪೆ', 'ಎಪಲೇ' ಎಂಬ ಸಂಬೋಧನ ರೂಪದಿಂದ ಸಂಬೋಧಿಸುತ್ತಾರೆ.

ಉದಾ : ಕ. ಎದ್ದು ಬಾರೇ

ಮ್ಯಾ. ಭಾ : ಲೇಸಿ ದಾಪೇ

೨. ಹೆಂಡತಿಯು ಗಂಡನನ್ನು ಸಂಬೋಧಿಸುವ ಸಂದರ್ಭದಲ್ಲಿ 'ಎಮಿ', 'ಎಮೇ' ಎಂಬ ಸಂಬೋಧನ ರೂಪದಿಂದ ಸಂಬೋಧಿಸುತ್ತಾರೆ.

ಉದಾ : ಕ. ಏನ್ರೀ ಊಟ ಮಾಡುವುದಕ್ಕೆ ಬರ್ರಿ

ಮ್ಯಾ. ಭಾ : ಎಮೀ ಊಟಂ ತಾಗ ದಾಂಡಿ

ಕೌಟುಂಬಿಕ ಜೀವನದ ರಹಸ್ಯ ವಿಷಯಗಳನ್ನು ಮಾತನಾಡುವಾಗ ಇಬ್ಬರು ಏಕವಚನ ಬಳಸುವುದುಂಟು. ಈ ರೀತಿಯ ಭಾಷಾ ಬಳಕೆಯು ಎಲ್ಲಾ ಸಮುದಾಯದಲ್ಲಿ ಸರ್ವೇ ಸಾಮಾನ್ಯವಾಗಿ ಕಂಡುಬರುತ್ತದೆ. ನೇರವಾಗಿ ಗಂಡನ ಹೆಸರನ್ನು ಸೂಚಿಸಿ ಮಕ್ಕಳ ಮೇಲೆ ಅಥವಾ ಸರ್ವನಾಮಗಳೊಂದಿಗೆ ಸಂಬೋಧಿಸುವುದು ಗಂಡ ಹೆಂಡರಲ್ಲಿ ಕಂಡುಬರುತ್ತದೆ.

**ಸಹೋದರ - ಸಹೋದರಿಯರು**

ಸಾಮಾನ್ಯವಾಗಿ ಒಡಹುಟ್ಟಿದವರಲ್ಲಿ ಹಿರಿಯವ 'ಅಣ್ಣ'ನಾಗುತ್ತಾನೆ. ಆದರೆ ಅದರ ಬಳಕೆಯ ಪ್ರಸಾರ ವೈವಿಧ್ಯಮಯವಾಗಿದೆ. ಗಂಡಸರನ್ನು ಪ್ರೀತಿಯಿಂದ ಅಥವಾ ಗೌರವದಿಂದ ಸಂಬೋಧಿಸುವಾಗ ಸಾಧಾರಣವಾಗಿ ಈ ಬಂಧುಸೂಚಕ ಉಪಯೋಗವಾಗುತ್ತದೆ. ಮ್ಯಾಸನಾಯಕರಲ್ಲಿ 'ಅನ್ನ' ಎಂದು ಸಂಬೋಧಸುತ್ತಾರೆ. 'ದೊಡ್ಡಣ್ಣ' ಎಂಬ ಸಂಬಂಧವಾಚಕಕ್ಕೆ ಇವರಲ್ಲಿ 'ಗೊಪ್ಪನ್ನ', 'ಪೆದ್ದನ್ನ' ಎಂಬ ಬಂಧುಸೂಚಕಗಳು ಬಳಕೆಯಾಗುತ್ತವೆ. ಇವರ ವ್ಯಕ್ತಿನಾಮಗಳಲ್ಲಿ ಕನ್ನಡದ 'ಅಣ್ಣ' ಎಂಬ ವಾರ್ಗಿಕ ಬಂಧುಸೂಚಕಗಳು

ಬಳಕೆಯಾಗುತ್ತವೆ. ಉದಾ :

ಓಬ + ಅಣ್ಣ = ಓಬಣ್ಣ

ರಾಜ + ಅಣ್ಣ = ರಾಜಣ್ಣ

ತಿಪ್ಪ + ಅಣ್ಣ = ತಿಪ್ಪಣ್ಣ

ಬೋರ + ಅಣ್ಣ = ಬೋರಣ್ಣ

ಈ ಮೇಲಿನ ಪಟ್ಟಿಯಿಂದ ತಿಳಿದುಬರುವುದೇನೆಂದರೆ ಮ್ಯಾಸನಾಯಕರು ಹೆಸರುಗಳಲ್ಲಿ ಕನ್ನಡದ 'ಅಣ್ಣ'ವಾರ್ಗಿಕ ಪದ ಬಳಕೆಯಾಗುತ್ತದೆ. ಪರಿಸರದ ಭಾಷೆಯ ಅನಿವಾರ್ಯತೆಯಿಂದ ಪ್ರಯೋಗವಾಗಬಹುದು ಎಂದು ಊಹಿಸಲಾಗಿದೆ.

ಒಡಹುಟ್ಟಿದವರಲ್ಲಿ ಕಿರಿಯವ ತಮ್ಮನಾಗುತ್ತಾನೆ. ಅದರ ಪ್ರಸಾರವನ್ನು ಗಮನಿಸಿದರೆ ಹಿರಿಯರು ಕಿರಿಯರನ್ನು ಕುರಿತು ಮಾತನಾಡುವಾಗ ಪ್ರೀತಿ ಪೂರ್ವಕವಾಗಿ ಬಳಕೆಯಾಗುತ್ತದೆ. ಮ್ಯಾಸನಾಯಕರಲ್ಲಿ 'ತಮ್ಮುಡು' ಎಂದು ಸಂಬೋಧಿಸುತ್ತಾರೆ. ವಿಶೇಷವಾಗಿ 'ತಮ್ಮ' ಎಂಬ ಬಂಧುಸೂಚಕವು 'ಅಪ್ಪಯ್ಯ' ಎಂದು ಸಂಬೋಧಿಸುವುದು ಕಂಡುಬರುತ್ತದೆ. ಒಡಹುಟ್ಟಿದವರಲ್ಲಿ ಹಿರಿಯವಳು ಅಕ್ಕಳಾಗುತ್ತಾಳೆ. ಅದರ ಪ್ರಸಾರವನ್ನು ಗಮನಿಸಿದರೆ, ಪ್ರಸಾರ ಮಾಧ್ಯಮ ವಿಸ್ತಾರವಾಗುತ್ತದೆ. ಮ್ಯಾಸನಾಯಕರ ಕೌಟುಂಬಿಕವಲಯದ ಮಾತೃಭಾಷೆಯಲ್ಲಿ (ತೆಲುಗು) 'ಅಕ್ಕ' ಎಂದು ಸಂಬೋಧನೆ ಮಾಡುತ್ತಾರೆ. ಕನ್ನಡ ಮತ್ತು ತೆಲುಗು ದ್ರಾವಿಡ ಭಾಷಾ ವರ್ಗಕ್ಕೆ ಸಂಬಂಧಪಟ್ಟಿರುವದರಿಂದ, ಕೆಲವೊಂದು ಸಂಬಂಧವಾಚಕಗಳು ಮೂಲ ರೂಪದಲ್ಲಿ ಪ್ರಸಾರವಾಗುತ್ತವೆ.

ಪ್ರಾದೇಶಿಕ ಭಾಷೆಯಲ್ಲಿ 'ಅಕ್ಕ' ಎಂಬ ಬಂಧುಸೂಚಕ ವಾರ್ಗಿಕ ರೂಪದಲ್ಲಿ ಬಳಕೆಯಾಗುವಂತೆ ಮ್ಯಾಸನಾಯಕರ ಭಾಷೆಯಲ್ಲೂ ಬಳಕೆಯಾಗುತ್ತದೆ. ದೊಡ್ಡಕ್ಕ, ಸಣ್ಣಕ್ಕ, ಗುಣವಾಚಕಗಳೊಂದಿಗೆ ಕನ್ನಡದಲ್ಲಿ ಬಳಕೆಯಾದರೆ, ಇವರಲ್ಲಿ ಪೆದ್ದಕ್ಕ, ಸಣ್ಣಕ್ಕ ಎಂದು ಪ್ರಯೋಗವಾಗುತ್ತವೆ. 'ಅಕ್ಕ' ಎಂಬ ಬಂಧುಸೂಚಕ ವಾರ್ಗಿಕರೂಪ ವ್ಯಕ್ತಿನಾಮಗಳಲ್ಲಿ ಗೋಚರಿಸುತ್ತದೆ. ಉದಾ :

ಲಸಮ + ಅಕ್ಕ = ಲಸಮ್ಮಕ್ಕ

ಪಾಲ + ಅಕ್ಕ = ಪಾಲಕ್ಕ

ಓಬಳ + ಅಕ್ಕ = ಓಬಳಕ್ಕ

ನರಸ + ಅಕ್ಕ = ನರಸಕ್ಕ

ಬಂಧು ಸೂಚಕದ ವಾರ್ಗಿಕ ರೂಪಗಳು ಮ್ಯಾಸನಾಯಕರ ಸಮುದಾಯದಲ್ಲಿ ಬಳಕೆಯಾದಂತೆ ಇತರೆ ಸಮುದಾಯದಲ್ಲೂ ಬಳಕೆಯಾಗುತ್ತವೆ. ಇವರು ಆಡುನುಡಿಯಲ್ಲಿ 'ಯಕ್ಕಾ' ಎಂದು ಸಂಬೋಧನೆ ಮಾಡುತ್ತಾರೆ. 'ಅಕ್ಕ' ಎಂಬ ಬಂಧು ಸೂಚಕವನ್ನು ಸಮಾಜದಲ್ಲಿ ಸಾಮಾಜಿಕ ರಕ್ಷಣೆಗಾಗಿ ಗೌರವ ಸೂಚಕ ಪದವನ್ನಾಗಿ ಬಳಸುತ್ತಾರೆ.

ಒಡಹುಟ್ಟಿದವರಲ್ಲಿ ಕಿರಿಯವಳು ತಂಗಿಯಾಗುತ್ತಾಳೆ. ಇವರು ಮಾತೃಭಾಷೆಯಲ್ಲಿ 'ತಂಗಿ' ಎಂದು

ಪ್ರಯೋಗವಾಗುತ್ತದೆ. ಮತ್ತು ತಂಗಿ ಎಂಬ ಬಂಧುಸೂಚಕವು ಸಂಬೋಧನೆಯಲ್ಲಿ 'ಪಾಪ' ಎಂದು ಬಳಕೆ ಮಾಡುತ್ತಾರೆ. ಭಾಷಿಕ ಸಮುದಾಯದಲ್ಲಿ ಬಳಕೆಯಾಗುವ ಅಣ್ಣಾ, ಅಕ್ಕ, ತಮ್ಮ, ತಂಗಿ, ಸಂಬಂಧಸೂಚಕಗಳು, ಕುಟುಂಬದಲ್ಲಿನ ಸದಸ್ಯರ ಕಳ್ಳುಬಳ್ಳಿತನವನ್ನು ಗಟ್ಟಿಗೊಳಿಸುತ್ತವೆ. ಸಾಮಾಜಿಕ ಜನಜೀವನದಲ್ಲಿ ಈ ಸಂಬಂಧವಾಚಕಗಳ ಪಾತ್ರ ಪ್ರಮುಖವಾದದು. ಈ ಬಂಧು ಸೂಚಕಗಳನ್ನು ಸಮಾಜದಲ್ಲಿನ ಅಪರಿಚಿತ ವ್ಯಕ್ತಿಗಳೊಂದಿಗೆ ಸಂಬೋಧಿಸಿದಾಗ ಭಾವನೆಗಳ ಬದಲಾವಣೆಯಿಂದ ವಿಶ್ವಾಸತೆ ಹೆಚ್ಚಾಗುತ್ತದೆ. ಮನುಷ್ಯನ ಸಂಬಂಧಗಳು ಭಾಷೆಯಂತೆಯೇ ಸಂವಹನ ಶಕ್ತಿಯನ್ನು ಪಡೆದಿವೆ ಎಂಬುದು ಗಮನಿಸಬೇಕಾದ ಸಂಗತಿಯಾಗಿದೆ.

**ಅತ್ತೆ - ಮಾವ - ಅಳಿಯ - ಸೊಸೆ**

ಮ್ಯಾಸನಾಯಕರಲ್ಲಿ ಅತ್ತೆ - ಮಾವ ಸಂಬಂಧವಾಚಕಗಳಿಗೆ ಅತ್ತಾ / ಯತ್ತಾ-ಮಾಮ ಎಂದು ಸಂಬೋಧಿಸುವುದು ಕಂಡುಬರುತ್ತದೆ. 'ಅತ್ತೆ' ಎಂದರೆ ಹೆಂಡತಿಯ ತಾಯಿ. ಗಂಡನ ತಾಯಿ. ಸೋದರಮಾವನ ಹೆಂಡತಿ, ತಂದೆಯ ಒಡಹುಟ್ಟಿದವಳು ಅತ್ತೆಯಾಗುವುದುಂಟು. ಅದೇ ರೀತಿ ಹೆಂಡತಿಯ ಅಥವಾ ಗಂಡನ ತಂದೆ ಸೋದರತ್ತೆಯ ಗಂಡ, ತಾಯಿಯ ಅಣ್ಣ ಮಾವನಾಗುವುದುಂಟು.

| ಶಿಷ್ಟ ಕನ್ನಡ | ಮ್ಯಾಸನಾಯಕರ ಕೌಟುಂಬಿಕ ಭಾಷೆ |
|---|---|
| ಸೋದರ ಅತ್ತೆ | ಮ್ಯಾನ ಅತ್ತಾ |
| ಸೋದರಮಾವ | ಮ್ಯಾನ ಮಾಮ |
| ದೊಡ್ಡತ್ತೆ | ಪೆದ್ದತ್ತಾ / ಗೊಪ್ಪತ್ತಾ |
| ಸಣ್ಣತ್ತೆ | ಸನ್ನತ್ತಾ |

ಈ ಮೇಲಿನ ಪಟ್ಟಿಯಲ್ಲಿ ಅತ್ತೆ, ಮಾವ, ಬಂಧುವಾಚಕಗಳು ತೆಲುಗಿನಲ್ಲಿ ಬಳಕೆಯಾದರೂ ಸಹ 'ಗೊಪ್ಪತ್ತಾ' ಎಂಬ ಬಂಧುಸೂಚಕ ವಿಶೇಷವಾಗಿ ಬಳಕೆಯಾಗುತ್ತದೆ. ಅತ್ತೆ, ಮಾವ, ವಾರ್ಗಿಕ ರೂಪಗಳು ಇವೆರಡು ಭಾಷೆಗಳಲ್ಲಿ ಉಳಿದಿರುವುದು ಕಂಡುಬರುತ್ತದೆ. ಇವೆರಡು ಭಾಷೆಗಳು ದ್ರಾವಿಡ ಭಾಷಾವರ್ಗಕ್ಕೆ ಸೇರಿರುವದರಿಂದ ಸಾಮ್ಯತೆಯನ್ನು ಕಾಣಬಹುದು.

ಅಳಿಯ-ಸೊಸೆಯರನ್ನು ಮ್ಯಾಸನಾಯಕರು ತಮ್ಮ ಭಾಷೆಯಲ್ಲಿ ಅಲ್ಲುಡು, ಕ್ಯಾಡಲು ಎಂಬ ಸಂಬಂಧ ವಾಚಕಗಳು ಬಳಕೆಯಾಗುತ್ತವೆ. ಸಾಮಾನ್ಯವಾಗಿ ಇವರನ್ನು ಸಂಬಂಧವಾಚಕಗಳಿಂದ ಸಂಬೋಧಿಸುವುದು ಬಹಳ ಕಡಿಮೆ ಎಂದು ಹೇಳಬಹುದು. ಹಿರಿಯರು ಸಾಮಾನ್ಯವಾಗಿ ಹೆಸರಿನಿಂದ ಸಂಬೋಧಿಸುವುದು ಕಂಡುಬರುತ್ತದೆ. ಅಳಿಯನಾದವನಿಗೆ ಕುಟುಂಬದಲ್ಲಿ ಗೌರವವಾದ ಸ್ಥಾನವಿರುತ್ತದೆ. ಸೊಸೆಯಾದವಳು ಅತ್ತೆಮಾವಂದಿರ ಹೆಸರನ್ನು ಹೇಳಬಾರದು. ಅವರೊಂದಿಗೆ ಸಲಿಸಾಗಿ ಮಾತನಾಡಬಾರದು. ಎಂಬ ಭಾವನೆ ಇತರೆ ಸಮುದಾಯದವರಲ್ಲಿ ಕಂಡುಬರುತ್ತದೆ.

**ಅತ್ತಿಗೆ**

'ಅತ್ತಿಗೆ' ಎಂಬ ಬಂಧುಸೂಚಕಕ್ಕೆ ಮ್ಯಾಸನಾಯಕರಲ್ಲಿ 'ವದಿನಾ' ಎಂದು ಸಂಬೋಧಿಸುತ್ತಾರೆ. ಅತ್ತಿಗೆ ಎಂದರೆ ಅಣ್ಣನ ಹೆಂಡತಿಯೆಂದು ಹೇಳಬಹುದು. ಮ್ಯಾಸನಾಯಕರಲ್ಲಿ ಹೆಂಡತಿಯ ಅಕ್ಕನಿಗೂ 'ವದಿನಾ' ಎಂದು ಸಂಬೋಧಿಸುತ್ತಾರೆ ಮತ್ತು ಅತ್ತಿಗೆಗೆ ಮ್ಯಾಸನಾಯಕರಲ್ಲಿ ತಾಯಿಯ ಸ್ಥಾನಮಾನವನ್ನು ನೀಡಿರುವದನ್ನು ಕಾಣಬಹುದು. ಕೌಟುಂಬಿಕ ಜೀವನದಲ್ಲಿ ಅತ್ತಿಗೆಯ ಪಾತ್ರ ಹಿರಿದಾದ್ದರಿಂದ ಅತಿ ಹೆಚ್ಚಿನ ಜವಾಬ್ದಾರಿಯನ್ನು ಹೊಂದಿರುತ್ತಾಳೆ. 'ಅತ್ತಿಗೆ' ಎಂಬ ಬಂಧುಸೂಚಕವು ಹೆಸರಿನ ಮೂಲಕ ಸಂಬೋಧಿಸುವದು ಕಂಡುಬರುತ್ತದೆ. ಉದಾ :

| ಶಿಷ್ಟ ಕನ್ನಡ | ಮ್ಯಾಸನಾಯಕರ ಕೌಟುಂಬಿಕ ಭಾಷೆ |
|---|---|
| ದೊಡ್ಡ ಅತ್ತಿಗೆ | ಪೆದ್ದ ವದಿನಾ |
| ಲಸಮಕ್ಕ ಅತ್ತಿಗೆ | ಲಸಮಕ್ಕ ವದಿನಾ |

**ಭಾವ - ಮೈದುನ**

ಮ್ಯಾಸನಾಯಕರಲ್ಲಿ ಅಕ್ಕ ತಂಗಿಯರ ಗಂಡಂದರಿಗೆ, ಭಾವ - ಭಾಮರ್ದಿ ಎಂಬ ಸಂಬಂಧ ಸೂಚಕಗಳನ್ನು ಬಳಸುತ್ತಾರೆ. ಮತ್ತು ಹೆಂಡತಿಯ ಅಣ್ಣ ತಮ್ಮಂದಿರಿಗೆ 'ಭಾವ' ಎಂದು ಸಂಬೋಧಿಸುತ್ತಾರೆ. ಗಂಡನ ಅಣ್ಣನಿಗೆ 'ಭಾವ' ಎಂಬ ಸಂಬಂಧವಾಚಕವನ್ನು ಸಂಬೋಧನೆಯಲ್ಲಿ ಬಳಸುವುದಿಲ್ಲ. ಪರ್ಯಾಯವಾಗಿ ಮಾಮ ಎಂದು ಸಂಬೋಧಿಸುತ್ತಾರೆ. ಬೇರೆಯವರಿಗೆ ಪರಿಚಯ ಮಾಡುವ ಸಮಯದಲ್ಲಿ 'ಭಾವ' ಎಂದು ಹೇಳಿ ಪರಿಚಯ ಮಾಡಿಕೊಡುತ್ತಾರೆ. ಉದಾ :

| | |
|---|---|
| ಕನ್ನಡ - | ಭಾವ ಊಟ ಆಯಿತಾ? |
| ಮ್ಯಾಸನಾಯಕರ ಭಾಷೆ - | ಬಾವ ಊಟಮು ಆಯಿನಾ? |
| ಕನ್ನಡ - | ಭಾವ ಊರಿಗೆ ಹೋಗಿದ್ದಾನೆ |
| ಮ್ಯಾಸನಾಯಕರ ಭಾಷೆ - | ಬಾವ ಊರಿಕಿ ಪೋಯಾಡೆ |

'ಮೈದುನ' ಎಂಬ ಸಂಬಂಧವಾಚಕಕ್ಕೆ ಮ್ಯಾಸನಾಯಕರಲ್ಲಿ ಗಂಡನ ತಮ್ಮನಿಗೆ 'ಮರ್ದಿ' ಎಂಬ ಬಂಧುಸೂಚಕ ಬಳಕೆಯಾಗುತ್ತದೆ. ಪರಿಚಯಮಾಡುವ ಸಂದರ್ಭದಲ್ಲಿ ಮಾತ್ರ 'ಮರ್ದಿ' ಎಂದು ಸಂಬೋಧಿಸುತ್ತಾರೆ. ಆದರೆ ದಿನ ನಿತ್ಯ ಮಾತನಾಡುವ ಸಂದರ್ಭದಲ್ಲಿ 'ಅನ್ನಾ' ಎಂದು ಸಂಬೋಧನೆ ಮಾಡುವದು, ಕ್ಷೇತ್ರಕಾರ್ಯದಲ್ಲಿ ತಿಳಿದುಬಂದಿದೆ.

**ಅಜ್ಜ - ಅಜ್ಜಿ - ಮೊಮ್ಮಗ - ಮೊಮ್ಮಗಳು**

'ಅಜ್ಜ-ಅಜ್ಜಿ' ಎಂಬ ಬಂಧುಸೂಚಕಗಳಿಗೆ ಮ್ಯಾಸನಾಯಕರಲ್ಲಿ 'ತಾತ', 'ಅವ್ವ' ಎಂದು ಸಂಬಂಧ ವಾಚಕಗಳು ಪ್ರಯೋಗವಾಗುತ್ತವೆ. ಸಂಬೋಧನೆಯಲ್ಲಿ ತಾತ-ಅವ್ವ ಎಂದು ಬಳಕೆಮಾಡುತ್ತಾರೆ. 'ತಾತ'

ಎಂಬ ಬಂಧುಸೂಚಕವನ್ನು ಹೆಸರಿನ ಕೊನೆಯಲ್ಲಿ ಸೇರಿಸಿಕೊಂಡು ಸಂಬೋಧನೆ ಮಾಡುತ್ತಾರೆ. ಉದಾ:

ಓಬಯ್ಯ + ತಾತ = ಓಬಯ್ಯತಾತ

ಮಾದಯ್ಯ + ತಾತ = ಮಾದಯ್ಯತಾತ

ಹನುಮಯ್ಯ + ತಾತ = ಹನುಮಯ್ಯತಾತ

'ಅಜ್ಜಿ' ಎಂಬ ಬಂಧುಸೂಚಕಕ್ಕೆ ಮ್ಯಾಸನಾಯಕರಲ್ಲಿ 'ಅವ್ವ', 'ಅಬ್ಬ' ಎಂದು ಬಳಕೆಯಾಗುವದು ಕಂಡುಬರುತ್ತದೆ.

ಉದಾ : ಭೀಮಕ್ಕ + ಅವ್ವ + ಭೀಮಕ್ಕವ್ವ

ನಿಂಗಮ್ಮ + ಅವ್ವ = ನಿಂಗಮ್ಮವ್ವ

ಚೌಡಮ್ಮ + ಅವ್ವ = ಚೌಡಮ್ಮವ್ವ

'ಅವ್ವ' ವಾರ್ಗಿಕ ರೂಪದ ಪ್ರಸಾರವು ವಿಸ್ತಾರವಾಗಿದೆ. ಮೊಮ್ಮಗ / ಮೊಮ್ಮಗಳು ಎಂಬ ಸಂಬಂಧವಾಚಕಗಳಿಗೆ ಇವರಲ್ಲಿ ಮನಮಗೊಡಕು / ಮನುಮಬಿಡ್ನ - ಮನುಮರಾಲು ಎಂಬ ಪದಗಳು ಬಳಕೆಯಾಗುತ್ತವೆ. ಮಗನ ಅಥವಾ ಮಗಳ ಮಗನು ಮೊಮ್ಮಗನಾಗುತ್ತಾನೆ. ಮತ್ತು ಮಗನ ಅಥವಾ ಮಗಳ ಮಗಳು ಮೊಮ್ಮಗಳು ಸಂಬಂಧವಾಚಕಗಳಾಗಿ ಗೋಚರಿಸುತ್ತೇವೆ. ಉದಾ :

| ಶಿಷ್ಟ ಕನ್ನಡ | ಮ್ಯಾಸನಾಯಕರ ಕೌಟುಂಬಿಕ ಭಾಷೆ |
|---|---|
| ಮರಿ + ಮೊಮ್ಮಗ = ಮರಿಮೊಮ್ಮಗ | ಮರಿ + ಮನುಮುಗೊಡಕು = ಮರಿಮನಮುಗೊಡುಕು |
| ಕಿರಿಮೊಮ್ಮಗ | ಸನ್ನಮನುಮುಗೊಡಕು |
| ಹಿರಿಮೊಮ್ಮಗಳು | ಪೆದ್ದಮನುಮುರಾಲು |

ಮೊಮ್ಮಗ - ಮೊಮ್ಮಗಳು ಎಂಬ ಸಂಬಂಧವಾಚಕಗಳ ಪ್ರಸಾರ ವೈವಿಧ್ಯಮವಾಗಿದೆ.

### ನಾದುನಿ

ಸಾಮಾನ್ಯವಾಗಿ ಗಂಡನ ಅಕ್ಕ ಅಥವಾ ತಂಗಿ, 'ನಾದುನಿ'ಯರಾಗುತ್ತಾರೆ. ಈ ಬಂಧುಸೂಚಕವು ಸಂಬೋಧನೆಯಲ್ಲಿ ಬಳಕೆಯಾಗುವುದಿಲ್ಲ ಇನ್ನೊಬ್ಬರಿಗೆ ಪರಿಚಯಿಸುವಾಗ ಮಾತ್ರ ಬಳಕೆಯಾಗುತ್ತದೆ. ಆದರೆ ಮ್ಯಾಸನಾಯಕರ ಭಾಷೆಯಲ್ಲಿ ಸಂಬೋಧನೆಯ ಸಂದರ್ಭದಲ್ಲಿ 'ಸನ್ನಮ್ಮ' ಎಂಬ ಬಂಧುಸೂಚಕವನ್ನು ಪ್ರಯೋಗಿಸುತ್ತಾರೆ. ಇವರು 'ನಾದುನಿ'ಗೆ 'ಆಡಬಿಡ್ನ' ಎಂಬ ಪದವನ್ನು ಸಂಬಂಧಸೂಚಕವಾಗಿ ಬಳಕೆ ಮಾಡುವುದು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿತು.

"ಸಮಾಜದಲ್ಲಿ ಬಂಧುತ್ವ ಪದಗಳಿಂದ ವ್ಯಕ್ತಿಗಳ ನಡುವೆ ಪರಸ್ಪರ ಪ್ರೀತಿ, ವಿಶ್ವಾಸ, ಸಲಿಗೆ ಹೆಚ್ಚಿ ಆಪ್ತರಾಗಲು ಬಂಧುತ್ವಪದಗಳು ಸಹಾಯಾಮಾಡುತ್ತವೆ. ಅಲ್ಲದೆ ವ್ಯಕ್ತಿಯ ಸ್ಥಾನಮಾನ, ವಯಸ್ಸು, ಇತ್ಯಾದಿ

ವಿಚಾರಗಳನ್ನು ಪರಿಚಯ ಮಾಡಿಕೊಡುತ್ತವೆ. ಈ ಬಂಧುತ್ವ ಪದಗಳು ನಮ್ಮನ್ನು ಸುಸಂಸ್ಕೃತರನ್ನಾಗಿ ಮಾಡುತ್ತವೆ. ಶೈಕ್ಷಣಿಕವಾಗಿ ಮಕ್ಕಳಲ್ಲಿ ಬಾಲ್ಯದಿಂದಲೇ ಗೌರವ ಮನೋಭಾವನೆ ಮೂಡಿಸಲು ಇವು ಸಹಾಯ ಮಾಡುತ್ತವೆ."[೪]

## ಆ. ಸಂಬೋಧನಾ ರೂಪಗಳು

ಭಾಷಿಕರ ಪ್ರದೇಶ, ವರ್ಗ, ಜಾತಿ, ಲಿಂಗ, ವಯಸ್ಸನ್ನಾಧರಿಸಿ ಸಂಬೋಧನೆಗಳ ಬಳಕೆಯಲ್ಲಿ ಭಿನ್ನತೆ ಕಂಡುಬರುತ್ತದೆ. ಭಾಷಾ ಸಮುದಾಯದಲ್ಲಿ ಭಾಷಿಕರ ಜೀವನ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವಲ್ಲಿ ಸಂಬೋಧನಾ ರೂಪಗಳು ಮಹತ್ವದ ಪಾತ್ರ ವಹಿಸುತ್ತವೆ. ಮ್ಯಾಸನಾಯಕರ ಭಾಷಿಕ ಸಮುದಾಯಗಳಲ್ಲಿನ ಬಳಕೆಯಾಗುವ ಕೆಲವು ಸಂಬೋಧನ ರೂಪಗಳ ಸ್ವರೂಪ ವಿಶೇಷವಾಗಿದೆ. ಕೂಗುವ ಮತ್ತು ಹೇಳುವ ಹಾಗೂ ಕರೆಯುವ ಸಂದರ್ಭದಲ್ಲಿ ಉಪಯೋಗಿಸುವ ಪದಗಳು ಸಂಬೋಧನಗಳಾಗಿವೆ. ಈ ಸಂಬೋಧನಾ ರೂಪಗಳು ಏಕವಚನದಿಂದಲೇ ಕೂಡಿರುತ್ತವೆ. ಬಹುವಚನಗಳಿಂದ ಕೂಡಿರುವುದು ಬಹಳ ಅಪರೂಪ.

### ೧. ಹಿರಿಯರು - ಕಿರಿಯರಿಗೆ ಬಳಸುವ ಸಂಬೋಧನಾ ರೂಪಗಳು

ಮ್ಯಾಸನಾಯಕ ಜನಾಂಗದಲ್ಲಿ ಹಿರಿಯರು ಕಿರಿಯರನ್ನು ಸಂಬೋಧಿಸುವಾಗ ಬಂಧುವಾಚಕಗಳನ್ನು ಬಳಸುವುದನ್ನು ಇಲ್ಲಿ ಸಾಮಾನ್ಯವಾಗಿ ಹೆಸರಿನಿಂದ ಇಲ್ಲವೇ ಸಂಬೋಧನ ರೂಪಗಳಿಂದ ಸಂಬೋಧಿಸುವುದು ಕಂಡುಬರುತ್ತದೆ.

| ಶಿಷ್ಟ ಕನ್ನಡ | ಮ್ಯಾಸನಾಯಕರ ಕೌಟುಂಬಿಕ ಭಾಷೆ |
|---|---|
| ಏನಲೇ | ಏಮಲೇ |
| ಬಾರಯ್ಯ | ದಾರಯ್ಯ |
| ಏನು | ಏಮಿ |
| ಬಾರಲೇ | ದಾರಲೇ / ದಾಮಲೇ / ದಾವಲೇ |
| ಹೋಗಲೇ | ಪೋವಲೇ |
| ಏನೇ | ಏಮೇ |
| ನಡಿರಿ | ನಡಿರಾ |
| ಬಾರೋ | ದಾರೋ |
| ಹೋಗೋಣ ಬಾ | ಪೋದಾಮ ದಾ |
| ನೋಡಲೇ | ಸೂಡ್ಮಲೇ |
| ಬಾರೇ | ದಾವೇ, ದಾಪೇ |

ಮ್ಯಾಸನಾಯಕರಲ್ಲಿ ಸಂಬೋಧನಾರೂಪಗಳು ವಿಶೇಷವಾಗಿ ಬಳಕೆಯಾಗುತ್ತವೆ. ಇವರ ಮಾತೃಭಾಷೆ ತೆಲುಗುವಾದರೂ ಸಹ ಸಂಬೋಧನಾರೂಪಗಳು ಭಿನ್ನವಾಗಿ ಬಳಕೆಯಾಗುವುದು ಕಂಡುಬರುತ್ತವೆ. ಇವರ ಭಾಷೆ ಮೇಲೆ ಪ್ರಾದೇಶಿಕ ಭಾಷೆಯಾದ ಕನ್ನಡದ ಪ್ರಭಾವ ಬೀರಿದೆ ಎಂದು ಹೇಳಬಹುದು. ವಿಶೇಷವಾಗಿ ಬಳಕೆಯಾಗುವಂತಹ ಸಂಬೋಧನರೂಪಗಳಾದ ದಾಮೆಲೇ, ಸೂಡ್ಮಲೇ, ದಾರಯ್ಯ ಮುಂತಾದ ಪದಗಳಿಂದ ತಿಳಿದುಬರುತ್ತದೆ. ಕನ್ನಡದ 'ಬಾರೋ' ಎಂಬುದಕ್ಕೆ ಮ್ಯಾಸನಾಯಕರ ಭಾಷೆಯಲ್ಲಿ 'ದಾರೋ' ಎಂದು ಸಂಬೋಧಿಸುತ್ತಾರೆ. ಪದಾದಿಯಲ್ಲಿ 'ಬ' ಕಾರ ಲೋಪವಾಗಿ 'ದ' ಕಾರ ಆದೇಶವಾಗಿ ಬಂದಿರುವುದನ್ನು ಕಾಣಬಹುದು.

**೨. ಕಿರಿಯರು ಹಿರಿಯರನ್ನು ಸಂಬೋಧಿಸುವಾಗ ಬಳಸುವ ಸಂಬೋಧನಾ ರೂಪಗಳು**

ಭಾಷಿಕ ಸಮುದಾಯದಲ್ಲಿ ಕಿರಿಯರು ಹಿರಿಯರನ್ನು ಸಂಬೋಧಿಸುವ ಸಂದರ್ಭದಲ್ಲಿ ಸಂಬಂಧವಾಚಕಗಳನ್ನು ಅವಶ್ಯಕವಾಗಿ ಬಳಸುತ್ತಾರೆ ಮತ್ತು ಗೌರವಸೂಚಕ ಪದಗಳೊಂದಿಗೆ ಬಹುವಚನಗಳ ಪ್ರತ್ಯಯವನ್ನು ಬಳಸುತ್ತಾರೆ. ಮ್ಯಾಸನಾಯಕರಲ್ಲಿ ಬಳಕೆಯಾಗುವ ಸಂಬೋಧನಾರೂಪಗಳನ್ನು ನೋಡ ಬಹುದು.

| ಶಿಷ್ಟ ಕನ್ನಡ | ಮ್ಯಾಸನಾಯಕರ ಕೌಟುಂಬಿಕ ಭಾಷೆ |
|---|---|
| ಅಪ್ಪ | ಅಯ್ಯ / ಯಯ್ಯ |
| ಅಣ್ಣ / ಯಣ್ಣ | ಅನ್ನ / ಯನ್ನಾ |
| ಅಜ್ಜ | ತಾತ |
| ಅಜ್ಜಿ | ಅವ್ವ / ಅಬ್ಬ / ಯವ್ವಾ |
| ಅಕ್ಕ / ಯಕ್ಕ | ಅಕ್ಕ / ಯಕ್ಕ |
| ಅಮ್ಮ | ಅಮ್ಮ / ಯಮ್ಮ |
| ಅತ್ತೆ | ಅತ್ತಾ / ಯತ್ತಾ |
| ಮಾವ | ಮಾಮ |
| ಚಿಕ್ಕಪ್ಪ | ಸನ್ನಯ್ಯ |
| ದೊಡ್ಡಪ್ಪ | ಪೆದ್ದಯ್ಯ / ಗೊಪ್ಪಯ್ಯ |
| ಅವರು | ವಾರು |
| ಎಲ್ಲಾರು | ಅಂದರೂ |

ಮ್ಯಾಸನಾಯಕರು ತಮ್ಮ ಮಾತೃಭಾಷೆಯಲ್ಲಿ ಸಂಬಂಧವಾಚಕಗಳೊಂದಿಗೆ ಸಂಬೋಧನೆ ಮಾಡುವುದನ್ನು ಕಾಣಬಹುದು.

೩. ವ್ಯಕ್ತಿನಾಮಗಳೊಂದಿಗೆ ಸಂಬೋಧಿಸುವ ಕ್ರಮ

'ಹೆಸರಿನಲ್ಲೇನಿದೆ ಮಣ್ಣು' ಎಂದು ಕೆಲವರು ಮೂಗು ಮುರಿಯುವುದುಂಟು. ಆದರೆ ಹೆಸರೇ ಮುಖ್ಯ. ಹೆಸರಿನಲ್ಲೇ ಎಲ್ಲಾ ಇರುವುದು ಎನ್ನುವವರಿಗೆ ಕೊರತೆಯಿಲ್ಲ. ವಸ್ತು, ವ್ಯಕ್ತಿಗಳಿಗೆ ಯೋಗ್ಯವಾದ ಹೆಸರನ್ನು ನೀಡಿದಾಗಲೇ ಜ್ಞಾನದ ವಿಕಾಸವು ಆರಂಭಗೊಳ್ಳುತ್ತದೆಯೆಂದು ಚೀನಾ ದೇಶದ ಒಂದು ಗಾದೆಯ ಮಾತು ಹೇಳುತ್ತದೆ. ಸಮಾಜದ ಜೀವಿಗಳಾದ ಮನುಷ್ಯನ ಪ್ರತ್ಯೇಕ ಅಸ್ತಿತ್ವ ಗುರುತಿಸುವುದಕ್ಕೆ ಇರುವ ಭಾಷಿಕ ಘಟಕಗಳು ಎಂದರೆ ವ್ಯಕ್ತಿನಾಮಗಳು.

"ಭಾಷಿಕ ಸನ್ನಿವೇಶದಲ್ಲಿ ಕೆಲವು ವೇಳೆ ಹಲವರನ್ನು ಸಂಬೋಧಿಸಲು ಒಂದೇ ಬಂಧುತ್ವ ಸೂಚಕ ಪರಿಭಾಷೆಯನ್ನು ಬಳಸುವುದರಿಂದ ಅನೇಕ ಗೊಂದಲಗಳು ಉಂಟಾಗಬಹುದು ಅಂತಹ ಸಂದರ್ಭಗಳು ಬಂದಾಗ ಒಂದು ಪರಿಹಾರವನ್ನು ಹುಡುಕಬಹುದು. ವ್ಯಕ್ತಿಯೊಬ್ಬನನ್ನು ಸೂಚಿಸಲು ಬಳಸುವ ಬಂಧುತ್ವದ ಸೂಚಕದ ಜೊತೆಗೆ ಆ ವ್ಯಕ್ತಿಯ ಹೆಸರನ್ನು ಸೇರಿಸುವುದುಂಟು."[೫] ಮ್ಯಾಸನಾಯಕರ ಭಾಷಿಕ ಸಮುದಾಯದಲ್ಲಿ ವ್ಯಕ್ತಿನಾಮಗಳಿಗೆ ಸಂಬಂಧಸೂಚಕ ವಾರ್ಗಿಕ ಪದಗಳನ್ನು ಬಳಸಿ ಸಂಬೋಧಿಸುವದುಂಟು.

| ಶಿಷ್ಟ ಕನ್ನಡ | ಮ್ಯಾಸನಾಯಕರ ಕೌಟುಂಬಿಕ ಭಾಷೆ |
|---|---|
| ಈಶ್ವರಪ್ಪ ಮಾವ | ಈಶ್ವರ ಮಾಮ |
| ಬೋರಯ್ಯತಾತ | ಬೋರಯ್ಯತಾತ |
| ರಾಮಚಂದ್ರ ಚಿಕ್ಕಪ್ಪ | ರಾಮಚಂದ್ರ ಸನ್ನಯ್ಯ |
| ನರಸಿಂಹ ದೊಡ್ಡಪ್ಪ | ನರಸಿಂಹ ಗೊಪ್ಪಯ್ಯ (ಪೆದ್ದಯ್ಯ) |
| ನಿಂಗಣ್ಣ ಚಿಕ್ಕಪ್ಪ | ನಿಂಗಣ್ಣ ಸನ್ನಯ್ಯ |
| ಗಂಗಮ್ಮ ಅತ್ತೆ | ಗಂಗಮ್ಮ ಅತ್ತಾ |
| ಮಾರಕ್ಕ ಅವ್ವ | ಮಾರಕ್ಕ ಅಬ್ಬ (ಅವ್ವ) |
| ನಾಗರತ್ನ ಅಕ್ಕ | ನಾಗರತ್ನಾಕ್ಕ |

ಮೇಲಿನ ಪಟ್ಟಿಯಲ್ಲಿ ವ್ಯಕ್ತಿನಾಮಗಳು ಕನ್ನಡ ಭಾಷೆಯಲ್ಲಿ ಬಳಕೆಯಾಗುವ ಮಾದರಿಯಲ್ಲಿ ಮ್ಯಾಸನಾಯಕರ ಭಾಷೆಯಲ್ಲಿ ಪ್ರಯೋಗವಾಗುತ್ತದೆ. ಆದರೆ ಸಂಬಂಧವಾಚಕ ವಾರ್ಗಿಕಗಳು ಮಾತ್ರ ತೆಲುಗು ಭಾಷೆಯಲ್ಲಿ ಬಳಕೆಯಾಗುತ್ತವೆ. ಇವೆರೆಡು ದ್ರಾವಿಡ ಭಾಷಾವರ್ಗಕ್ಕೆ ಸೇರಿರುವುದರಿಂದ ಕೆಲವೊಂದು ಸಂಬಂಧವಾಚಕಗಳು ಒಂದೇ ರೀತಿಯಲ್ಲಿ ಕಾಣಬಹುದು. ಉಚ್ಚಾರಣಾ ನಿಯಮದಲ್ಲಿ ತೆಲುಗು ನಿಯಮವನ್ನು ಕಾಣಬಹುದು.

ಮ್ಯಾಸನಾಯಕರು ತಮ್ಮ ಕೌಟುಂಬಿಕ ವಲಯದಲ್ಲಿ ವ್ಯಕ್ತಿನಾಮಗಳಿಂದ ಸಂಬೋಧಿಸುವ ರೀತಿಯನ್ನು ಅವಲೋಕಿಸಬಹುದು.

೧. ಹಿರಿಯರು ಕಿರಿಯರ ವ್ಯಕ್ತಿನಾಮಗಳು ಸಂಬೋಧಿಸುವ ಕ್ರಮ

| ಕಿರಿಯರ ಹೆಸರು | ಮ್ಯಾಸನಾಯಕರ ಸಂಬೋಧನೆ |
|---|---|
| ದಾಸರ ನಾಗೇಂದ್ರ | ನಾಗೇಂದ್ರುಡು |
| ರಾಮಣ್ಣ | ರಾಮಡು |
| ಕೃಷ್ಣ | ಕಿಷ್ಟಡು |
| ರಾಜಪ್ಪ | ರಾಜಡು |
| ರಾಮಮೂರ್ತಿ | ರಾಮೂರ್ತಿ |
| ಪಾಲಯ್ಯ | ಪಾಲಗ |
| ಭೀಮಲಿಂಗಪ್ಪ | ಭೀಮಲಿಂಗಡು |
| ಮಾರಣ್ಣ | ಮಾರಡು |

ವ್ಯಕ್ತಿನಾಮಗಳ ಅಂತ್ಯ ಪರಿಸರದಲ್ಲಿ 'ಡು' ಕಾರ ಬಳಕೆಯಾಗುತ್ತದೆ. ಕನ್ನಡ ಪರಿಸರದಲ್ಲಿ ವ್ಯಕ್ತಿನಾಮಗಳು ಇಲ್ಲಿ ಬಳಕೆಯಾದರೂ ಸಹ ಉಚ್ಚಾರಣಾ ನಿಯಮದಲ್ಲಿ ತೆಲುಗು ಪ್ರತ್ಯಯವನ್ನು ಪ್ರಯೋಗ ಮಾಡುತ್ತಾರೆ.

೨. ಕಿರಿಯರು ಹಿರಿಯರ ವ್ಯಕ್ತಿನಾಮಗಳನ್ನು ಸಂಬೋಧಿಸುವ ಕ್ರಮ

| ಹಿರಿಯರ ಹೆಸರು | ಮ್ಯಾಸನಾಯಕರ ಸಂಬೋಧನೆ |
|---|---|
| ಮಾದಯ್ಯ | ಮಾದಯ್ಯ ತಾತ |
| ನಾಗಪ್ಪ | ನಾಗಪ್ಪಮಾಮ |
| ಹನುಮಯ್ಯ | ಹನುಮಯ್ಯತಾತ |
| ಗಂಗಣ್ಣ | ಗಂಗಣ್ಣ ಸನ್ನಯ್ಯ |

ಮ್ಯಾಸನಾಯಕರು ಹಿರಿಯರನ್ನು ಸಂಬೋಧಿಸುವ ಸಂದರ್ಭದಲ್ಲಿ, ಸಂಬಂಧವಾಚಕಗಳ ವಾರ್ಗಿಕಗಳನ್ನು ಬಳಸಿಕೊಂಡು ಪ್ರಯೋಗ ಮಾಡುತ್ತಾರೆ.

೪. ಸ್ಥಳನಾಮಗಳೊಂದಿಗೆ ಸಂಬೋಧಿಸುವ ಕ್ರಮ

ಸಂಬೋಧನೆಗೆ ಒಳಪಡಿಸುವ ವ್ಯಕ್ತಿ ಎದುರಿಗಿದ್ದರೆ, ಆ ವ್ಯಕ್ತಿಯನ್ನು ಸಂಬೋಧಿಸುವ ಸಂದರ್ಭದಲ್ಲಿ ಯಾವುದೇ ಸಮಸ್ಯೆಯು ಬಾರದೆ ಬಂಧುಸೂಚಕವನ್ನು ಬಳಸಬಹುದು. ಅದೇ ರೀತಿ ವ್ಯಕ್ತಿ ಬೇರೆ ಕಡೆ ಯಾವುದೇ ಸ್ಥಳದಲ್ಲಿ ಜೀವನ ಮಾಡುತ್ತಿದ್ದರೇ ಆ ವ್ಯಕ್ತಿ ಸಂಬಂಧಿಕನಾಗಿದ್ದರೆ ಅಂತಹ ಸಮಯದಲ್ಲಿ ಆ ಸ್ಥಳದ ಹೆಸರಿನೊಂದಿಗೆ ಸಂಬೋಧಿಸಬೇಕಾಗುತ್ತದೆ. ಬೇರೆಯವರಿಗೆ ಪರಿಚಯ ಮಾಡಿಕೊಡುವ ಸಂದರ್ಭದಲ್ಲಿ ಸ್ಥಳನಾಮಗಳು ಬಳಕೆಯಾಗುತ್ತವೆ.

"ಸ್ಥಳನಾಮಶಾಸ್ತ್ರಕ್ಕೆ ಆಂಗ್ಲಭಾಷೆಯಲ್ಲಿ ಟೊಪೊನಮಿ ಎಂಬ ಅಭಿದಾನವಿದೆ. ಇದು ಗ್ರೀಕ್ ಮೂಲದಲ್ಲಿ ಟಪೊಸ್ + ನೊಮಾಸ್ ಎಂಬ ಎರಡು ಪದಗಳಿಂದ ಮೂಡಿಬಂದುದಾಗಿದೆ. ಟೊಪಸ್ ಎಂದರೆ ಸ್ಥಳ ಎಂಬ ಅರ್ಥವನ್ನು ನೊಮೊಸ್ ಎಂದರೆ ಕುರಿತಾದ ಅಧ್ಯಯನ ಎಂಬರ್ಥವನ್ನು ನೀಡುತ್ತದೆ. ದೇಶ, ಗ್ರಾಮ, ಊರು ಎಂಬ ಪದಗಳಿಗೆ ಪರಂಪರಾನುಗತವಾದ ಸೀಮಿತ ಅರ್ಥವಿದೆ. ಅವುಗಳು ಸಾಮುದಾಯಿಕ ಮಾನವ ನೆಲೆಗಳ ಅರ್ಥವನ್ನು ತುಂಬಿಸಿಕೊಳ್ಳುವುವು. ಆದ್ದರಿಂದ ನವೀನವಾಗಿ ಚಲಾವಣೆಗೆ ಬಂದಿರುವ 'ಸ್ಥಳನಾಮ'ವೆಂಬ ಪದ ತುಂಬಾ ಸೂಕ್ತ ಮತ್ತು ಸಮರ್ಪಕ ಎಂದು ಭಾವಿಸಬಹುದಾಗಿದೆ."[೬]

ಮ್ಯಾಸನಾಯಕರ ತಮ್ಮ ಭಾಷಿಕ ಸಮುದಾಯದಲ್ಲಿ ಕುಟುಂಬದ ಸದಸ್ಯರು ಬೇರೆ ಸ್ಥಳದಲ್ಲಿ ನೆಲೆಸಿದ್ದರೆ, ಆ ವ್ಯಕ್ತಿಯನ್ನು ಸ್ಥಳನಾಮದೊಂದಿಗೆ ಬಂಧುಸೂಚಕ ವಾರ್ಗಿಕವನ್ನು ಸೇರಿಸಿ ಸಂಬೋಧಿಸುತ್ತಾರೆ.

| ಶಿಷ್ಟ ಕನ್ನಡ | ಮ್ಯಾಸನಾಯಕರ ಕೌಟುಂಬಿಕ ಭಾಷೆ |
|---|---|
| ತುಮಕೂರ್ಲುಹಳ್ಳಿಮಾವ | ತುಮಕೂರ್ಲುಪಲ್ಲಿ ಮಾಮ |
| ಕೋನಸಾಗರದ ದೊಡ್ಡಪ್ಪ | ಕೋನಸಾಗರಮು ಗೊಪ್ಪಯ್ಯ / ಪೆದ್ದಯ್ಯ |
| ಜೀರಹಳ್ಳಿತಾತ | ಜೀರಪಲ್ಲಿ ತಾತ |
| ಗೌರಸಮುದ್ರದ ಚಿಕ್ಕಪ್ಪ | ಗೌರಸಮುದ್ರಮು ಸನ್ನಯ್ಯ |
| ತಿಮ್ಮನಹಳ್ಳಿ ಸಾಹುಕಾರ | ತಿಮ್ಮನಪಲ್ಲಿ ಸಾವುಕಾಡು |
| ನಾಗಸಮುದ್ರದ ದೊಡ್ಡಮ್ಮ | ನಾಗಸಮುದ್ರಮು ಪೆದ್ದಮ್ಮ |

ಮ್ಯಾಸನಾಯಕರ ಭಾಷೆಯಲ್ಲಿ ಕನ್ನಡ ಪರಿಸರದ ಸ್ಥಳನಾಮಗಳ ಮೇಲೆ ತೆಲುಗಿನ ಪ್ರಭಾವ ಬೀರಿರುವುದು ಕಂಡುಬರುತ್ತದೆ.

**೩. ಮ್ಯಾಸನಾಯಕರ ಭಾಷಿಕ ಸಮುದಾಯದಲ್ಲಿ ಸ್ಥಳನಾಮಗಳನ್ನು ಸಂಬೋಧಿಸುವ ಕ್ರಮ**

| ಕನ್ನಡ ಸ್ಥಳನಾಮಗಳು | ಮ್ಯಾಸನಾಯಕರ ಸಂಬೋಧನೆ |
|---|---|
| ಪೆನ್ನಮ್ಮನಹಳ್ಳಿ | ಪೆನ್ನಮ್ಮಪಲ್ಲಿ |
| ಸೂರಮ್ಮನಹಳ್ಳಿ | ಸೂರಮ್ಮಪಲ್ಲಿ |
| ಬೊಮ್ಮಕನಹಳ್ಳಿ | ಬೊಮ್ಮಕಪಲ್ಲಿ |
| ಮಾರಮ್ಮನಹಳ್ಳಿ | ಮಾರಮ್ಮಪಲ್ಲಿ |
| ತಮ್ಮನಹಳ್ಳಿ | ತಮ್ಮಪಲ್ಲಿ |

ಮೇಲಿನ ಪಟ್ಟಿಯಲ್ಲಿ ಕನ್ನಡದ ಸ್ಥಳನಾಮಗಳಲ್ಲಿರುವ 'ನ' ಕಾರವು ಮ್ಯಾಸನಾಯಕರ ಭಾಷೆಯಲ್ಲಿ ಲೋಪವಾಗುವುದನ್ನು ಕಾಣಬಹುದು. ಕೆಲವೊಂದು ಸ್ಥಳನಾಮಗಳಲ್ಲಿ 'ನ' ಕಾರದ ಸ್ಥಾನದಲ್ಲಿ 'ಲ'ಕಾರ ಆದೇಶವಾಗಿ ಬರುವುದನ್ನು ಕಾಣಬಹುದು. ಕೆಳಗಿನ ಉದಾಹರಣೆಯಿಂದ ತಿಳಿಯಬಹುದು.

ಉದಾ :	ನೇತ್ರ + ನ + ಹಳ್ಳಿ = ನೇತ್ರನಹಳ್ಳಿ

ನೇತ್ರ + ಲ + ಪಲ್ಲಿ = ನೇತ್ರಲಪಲ್ಲಿ

ಕನ್ನಡದ ಸ್ಥಳನಾಮದ 'ಹಳ್ಳಿ' ವಾರ್ಗಿಕ ಸೂಚಿಯ ಪರ್ಯಾಯವಾಗಿ ತೆಲುಗಿನ 'ಪಲ್ಲಿ' ವಾರ್ಗಿಕ ಸೂಚಿಯ ಪದವು ಬಳಕೆಯಾಗುವುದು ಇವರ ಭಾಷೆಯಲ್ಲಿ ಕಾಣಬಹುದು. ಇನ್ನು ಕೆಲವು ಸ್ಥಳನಾಮಗಳನ್ನು ಗಮನಿಸಿದಾಗ ಮ್ಯಾಸನಾಯಕರ ಮಾತೃಭಾಷೆಯ ಮೇಲೆ ಕನ್ನಡದ ಪ್ರಭಾವ ಬೀರಿರುವುದನ್ನು ಕಂಡುಬರುತ್ತದೆ.

ಉದಾ :	ಹಿರೇ + ಕೆರೆ + ಹಳ್ಳಿ = ಹಿರೇಕೆರೆಹಳ್ಳಿ

ಪೆದ್ದ + ಕೆರೆ + ಪಲ್ಲಿ = ಪೆದ್ದಕೆರೆಪಲ್ಲಿ

ಕನ್ನಡದ 'ಕೆರೆ' ಎಂಬ ವಾರ್ಗಿಕಸೂಚಿ ತೆಲುಗಿನ ಸ್ಥಳನಾಮ ಉಚ್ಚಾರಣೆಯಲ್ಲಿ ಪ್ರಯೋಗವಾಗುವದು ಕಂಡುಬರುತ್ತದೆ. ಸ್ಥಳನಾಮಗಳಲ್ಲಿ ನುಡಿಮಿಶ್ರಣ ಪ್ರಕ್ರಿಯೆಯನ್ನು ಕಾಣಬಹುದು.

| ಉದಾ : | **ಶಿಷ್ಟಕನ್ನಡ** | **ಮ್ಯಾಸನಾಯಕರ ಭಾಷೆ** |
|---|---|---|
| | ಗುಡ್ಡದಹಳ್ಳಿ | ಗುಡ್ಡಮಪಲ್ಲಿ |

ಈ ಸ್ಥಳನಾಮವು ಮ್ಯಾಸನಾಯಕರ ಭಾಷೆಯಲ್ಲಿ 'ಗುಡ್ಡಮಪಲ್ಲಿ' ಎಂದು ಬಳಕೆಯಾಗುತ್ತದೆ. ಕನ್ನಡ, ಪದಾದಿಯ 'ಗುಡ್ಡ' ಕನ್ನಡ ಪದವು ತೆಲುಗಿನಲ್ಲಿ 'ಕೊಂಡ' ಎನ್ನುವ ಅರ್ಥವನ್ನು ಹೊಂದಿದೆ. ಕನ್ನಡದ ಸ್ಥಳನಾಮದ 'ದ' ಕಾರ ಲೋಪಗೊಂಡು, ಇವರ ಭಾಷೆಯಲ್ಲಿ 'ಮ' ಕಾರ ಆದೇಶವಾಗಿಬಂದು ನುಡಿಮಿಶ್ರಣ ಕ್ರಿಯೆ ನಡೆದಿದೆ. ಮ್ಯಾಸನಾಯಕರ ಭಾಷೆಯ ಮೇಲೆ ಪ್ರಾದೇಶಿಕ ಭಾಷೆಯಾದ ಕನ್ನಡದ ಪ್ರಭಾವ ಬೀರಿರುವುದು ಸ್ಥಳನಾಮಗಳಿಂದ ತಿಳಿದುಬರುತ್ತದೆ.

**೫. ಗುಣವಿಶೇಷಣಗಳೊಂದಿಗೆ ಸಂಬೋಧಿಸುವ ಕ್ರಮ**

ಭಾಷಾ ಸಮುದಾಯದಲ್ಲಿ ಭಾಷಿಕರು ಸಂಬಂಧಿಕರನ್ನು ಗುರುತಿಸಲು, ಬಂಧುಸೂಚಕಗಳೊಂದಿಗೆ ವಿಶೇಷಣಗಳನ್ನು ಬಳಸಿಕೊಳ್ಳುವದು ಅನಿವಾರ್ಯವಾಗುತ್ತದೆ. ಮ್ಯಾಸನಾಯಕರ ಸಮುದಾಯದಲ್ಲಿ ವಿಶೇಷಣಗಳೊಂದಿಗೆ ಸಂಬೋಧಿಸುವುದು ಕಾಣಬಹುದು.

| **ಶಿಷ್ಟ ಕನ್ನಡ** | **ಮ್ಯಾಸನಾಯಕರ ಕೌಟುಂಬಿಕ ಭಾಷೆ** |
|---|---|
| ದೊಡ್ಡಣ್ಣ | ಗೊಪ್ಪನ್ನ / ಪೆದ್ದನ್ನಾ |
| ಸಣ್ಣತಾತ | ಸನ್ನತಾತ |
| ಕಿರಿಮಗ | ಸನ್ನಕೊಡಕು |
| ಹಿರಿಮಗ | ಪೆದ್ದಕೊಡಕು |

ದೊಡ್ಡ, ಸಣ್ಣ, ಮುಂತಾದ ವಿಶೇಷಣಗಳಿಂದ ಬಂಧುಸೂಚಕಗಳನ್ನು ಉಪಯೋಗಿಸಿಕೊಂಡು ಸಂಬಂಧವಾಚಕಗಳನ್ನು ಗುರುತಿಸುತ್ತಾರೆ.

## ಆಚರಣೆಗಳಲ್ಲಿ ಸಂಬೋಧನಾರೂಪಗಳು

ಸಾಮಾನ್ಯವಾಗಿ ಆಚರಣೆ ಸಂದರ್ಭದಲ್ಲಿ ಭಾಷೆ ವೈವಿಧ್ಯತೆಯಿಂದ ಕೂಡಿರುತ್ತದೆ. ವಿವಾಹದಂತಹ ಸಂದರ್ಭದಲ್ಲಿ ಬಳಕೆಯಾಗುವ ಸಂಬಂಧವಾಚಕಗಳು ಮತ್ತು ಸಂಬೋಧನಾ ರೂಪಗಳು ವಿಶಿಷ್ಟತೆಯಿಂದ ಕೂಡಿರುತ್ತವೆ. ಮದುಮಗ / ಮದುಮಗಳು ಎಂಬ ಪದವಾಚಕಗಳಿಗೆ ಮ್ಯಾಸನಾಯಕರು ಮದ್ದಿಂಗಡು / ಮದ್ದಿಗಿತ್ತಿ (ಪೆಂಡ್ಲಿಕೊಡಕು - ಪೆಂಡ್ಲಿಬಿಡ್ಡ) ಎಂದು ಸಂಬೋಧಿಸುತ್ತಾರೆ. ಈ ಪದಗಳು ಮದುವೆಯ ಮುಂಚೆ ಮತ್ತು ವಿವಾಹದ ಸಂದರ್ಭದಲ್ಲಿ ಬಹಳ ಮುಖ್ಯವಾದ ಪಾತ್ರವಹಿಸುತ್ತವೆ. ಬೇರೆ ಸಮಯದಲ್ಲಿ ಈ ಪದಗಳನ್ನು ಬಳಸಿದರೆ ಹಾಸ್ಯಸ್ಪದವಾಗುತ್ತದೆ. ಇವರು ಹಬ್ಬ, ಆಚರಣೆಗಳು, ನಾಮಕರಣ, ಜವಳಿ ತೆಗೆಯುವ ಸಂದರ್ಭದಲ್ಲಿ ಮತ್ತು ಋತುಮತಿ ಶಾಸ್ತ್ರ ಸಂದರ್ಭದಲ್ಲಿ ಭಾಷೆ ವಿಶೇಷವಾಗಿ ಬಳಕೆಯಾಗುತ್ತದೆ.

ನಿಶ್ಚಿತಾರ್ಥ - ವಕ್ಕಾಕುಶಾಸ್ತ್ರಮು

ಋತುಮತಿಶಾಸ್ತ್ರ - ಗೊಪ್ಪದ್ದೈಯನಶಾಸ್ತ್ರಮು

ಮುಂತಾದ ಪದಗಳು ವಿಶೇಷವಾಗಿ ಆಚರಣೆ ಸಂದರ್ಭದಲ್ಲಿ ಬಳಕೆಮಾಡುತ್ತಾರೆ.

## ೩. ವ್ಯವಹಾರಿಕ ವಲಯ

ಭಾಷಾ ಸಮುದಾಯದಲ್ಲಿ ಭಾಷಿಕರು ಹಲವು ಬಗೆಯ ಸಾಮಾಜಿಕ ಸಂಬಂಧಗಳಿಗೆ ಹೆಣೆದುಕೊಂಡಿರುತ್ತಾರೆ. ಅಂತಹ ಸಾಮಾಜಿಕ ಸಂಬಂಧಗಳಲ್ಲಿ ವ್ಯವಹಾರಿಕ ವಲಯವೂ ಒಂದಾಗಿದೆ. ಕುಟುಂಬದಲ್ಲಿನ ಭಾಷೆ ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ವಂಶಪರಂಪರೆಯಾಗಿ ರವಾನಿಸಿಕೊಂಡು ಬರುತ್ತದೆ. ಆದರೆ ವ್ಯವಹಾರಿಕ ವಲಯದ ಭಾಷೆ ಪರಿಸರಕ್ಕೆ ತಕ್ಕಂತೆ ಬದಲಾವಣೆಯಾಗುತ್ತದೆ. ಮೊಳಕಾಲ್ಮೂರು ಪ್ರದೇಶದಲ್ಲಿ ನೆಲೆಸಿರುವ ಮ್ಯಾಸನಾಯಕರು ದ್ವಿಭಾಷಿಕರರಾಗಿದ್ದಾರೆ. ಅವರ ಕೌಟುಂಬಿಕ ವಲಯದ ಭಾಷೆಯ ಸ್ವರೂಪವನ್ನು ಹಿಂದಿನ ಭಾಗದಲ್ಲಿ ತಿಳಿಸಲಾಗಿದೆ. ಅದೇ ರೀತಿಯಾಗಿ ವ್ಯವಹಾರಿಕ ವಲಯ ಭಾಷಾ ಬಳಕೆಯ ಸ್ವರೂಪವನ್ನು ವಿಶ್ಲೇಷಿಸಲಾಗುವುದು.

### ೧. ಶಾಲಾ ಕಾಲೇಜುಗಳಲ್ಲಿನ ಭಾಷಾ ಬಳಕೆ

ಶಾಲಾ ಕಾಲೇಜುಗಳಲ್ಲಿ ಬಳಕೆಯಾಗುವ ಭಾಷೆಯು ಸಾಮಾನ್ಯವಾಗಿ ಪ್ರಾದೇಶಿಕ ಭಾಷೆಯಾಗಿರುತ್ತದೆ. ಇಂತಹ ಆವರಣಗಳಲ್ಲಿ ಮ್ಯಾಸನಾಯಕ ಜನಾಂಗದವರು ತಮ್ಮ ಮಕ್ಕಳನ್ನು ಶಾಲೆಗೆ ಸೇರಿಸುವ ಸಮಯದಲ್ಲಿ ಮತ್ತು ಮಕ್ಕಳ ಕಲಿಕೆ ಸಂಬಂಧಿಸಿದಂತಹ ವಿಷಯಗಳನ್ನು ಕನ್ನಡದಲ್ಲಿ ಮಾತನಾಡುವದನ್ನು ಕಾಣಬಹುದು. ಶಿಕ್ಷಕರನ್ನು ಗೌರವಸೂಚಕ ಪದಗಳಾದ ಸ್ವಾಮಿ, ಮೇಷ್ಟ್ರು, ಸರ್ ಮುಂತಾದ ಪದಗಳಿಂದ ಸಂಬೋಧಿಸುತ್ತಾರೆ. ಕೆಲವೊಂದು ಉದಾಹರಣೆಗಳಿಂದ ಮ್ಯಾಸನಾಯಕರ ಭಾಷೆಯನ್ನು ಗಮನಿಸಬಹುದು.

ಉದಾ : ೧. ಸರ್ ನಾಳೆ ಮಾ ವುಡುಗಿಡು ಸಾಲಿಗೆ ಬರಲ್ಲಾ

೨. ಪರೀಕ್ಷಲು ಯಾವಾಗ ನಡಿತಾವ್ ಸರ್

೩. ಮಾ ವುಡುಗಿಲಿಕಿ ಬೇಸು ಓದುಕಲಿಸಿರಿ ಸ್ವಾಮಿ

ಈ ಮೇಲಿನ ಮೂರು ವಾಕ್ಯಗಳು ಕನ್ನಡ ನಿಯಮವನ್ನು ಒಳಗೊಂಡಿದ್ದರೂ ಸಹ ತೆಲುಗಿನ ಭಾಷಾ ಅಂಶಗಳನ್ನು ಕಾಣಬಹುದು. ಈ ವಾಕ್ಯಗಳನ್ನು ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಹೆಚ್ಚಾಗಿ ಮಹಿಳೆಯ ರಿಂದ ಸಂಗ್ರಹಿಸಿದ ಮಾಹಿತಿಯಾಗಿದೆ. ಹೆಚ್ಚಾಗಿ ಅನಕ್ಷರಸ್ಥ ಮಹಿಳೆಯರಲ್ಲಿ ಇಂತಹ ವಾಕ್ಯಗಳು ಬಳಕೆಯಾಗುತ್ತವೆ. ಮ್ಯಾಸನಾಯಕ ಜನಾಂಗದ ಮಕ್ಕಳಿಗೆ ಬೋಧಿಸುವ ಸಂದರ್ಭದಲ್ಲಿ ಶಿಕ್ಷಕರು ಅನೇಕ ಭಾಷಾ ಸಮಸ್ಯೆಗಳನ್ನು ಎದುರಿಸುತ್ತಾರೆ. ಮಕ್ಕಳಿಗೆ ಮನೆಯ ಆವರಣದ ಭಾಷೆ ತೆಲುಗು ಆಗುವದರಿಂದ ಕನ್ನಡ ಭಾಷೆಯನ್ನು ಕಲಿಯುವುದು ಕಷ್ಟವಾಗುತ್ತದೆ.

ಹಳೆ ತಲೆಮಾರಿನವರಿಗೆ ಮತ್ತು ಅನಕ್ಷರಸ್ಥ ಮಹಿಳೆಯರಿಗೆ ಕನ್ನಡಭಾಷೆ ಅರ್ಥವಾಗುತ್ತದೆ. ಆದರೆ ಅಭಿವ್ಯಕ್ತಪಡಿಸುವ ಮಾಧ್ಯಮ ತೆಲುಗುಭಾಷೆಯಿಂದ ಕೂಡಿರುತ್ತದೆ. ಹೊಸತಲೆಮಾರಿನ ಯುವಪೀಳಿಗೆ ಮತ್ತು ವಿದ್ಯಾವಂತರು ಶಾಲಾಕಾಲೇಜ್‌ಗಳಲ್ಲಿ ಕನ್ನಡವನ್ನು ಸ್ಪಷ್ಟವಾಗಿ ಬಳಸುತ್ತಾರೆ.

**೨. ಮಾರುಕಟ್ಟೆಗಳಲ್ಲಿನ ಭಾಷಾ ಬಳಕೆ**

ಮಾರುಕಟ್ಟೆ ಪ್ರದೇಶಗಳಲ್ಲಿ ಅನೇಕ ಭಾಷೆಗಳು ಬಳಕೆಯಾಗುತ್ತವೆ. ಆದರೆ ಪ್ರಾದೇಶಿಕ ಭಾಷೆಯೇ ಮುಖ್ಯವಾಗುತ್ತದೆ. ಮ್ಯಾಸನಾಯಕ ಜನಾಂಗದವರು ಮಾರುಕಟ್ಟೆಗಳಲ್ಲಿ ವ್ಯವಹರಿಸುವ ಸಂದರ್ಭದಲ್ಲಿ ಕನ್ನಡ ಬಳಸುವದನ್ನು ಕಾಣಬಹುದು. ಅಂತಹ ಸಂದರ್ಭದಲ್ಲಿ ತೆಲುಗುಭಾಷೆಯ ಪದಗಳ ನುಡಿ ಬೆರಕೆಯಾಗುವುದು ಕಂಡುಬರುತ್ತದೆ. ಮೊಳಕಾಲ್ಮೂರು ಪ್ರದೇಶದಲ್ಲಿ ಸಂತೆ ನಡೆಯುವ ಸ್ಥಳಗಳಾದ ಮೊಳಕಾಲ್ಮೂರು, ನಾಗಸಮುದ್ರ, ರಾಂಪುರ ಮುಂತಾದ ಸ್ಥಳಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಮ್ಯಾಸನಾಯಕ ಜನಾಂಗದವರು ತರಕಾರಿ ಮತ್ತು ದವಸ ಧಾನ್ಯಗಳನ್ನು ಖರೀದಿಸುವ ಸಂದರ್ಭದಲ್ಲಿ ಕೆಲವು ವಾಕ್ಯಗಳನ್ನು ಗಮನಿಸಲಾಗಿದೆ.

ಉದಾ : ೧. ಟೊಮೊಟಾಲು ಎಷ್ಟು ರೂಪಾಯಿಕಿ ಕೆ.ಜಿ. ?

೨. ಉರ್ಲುಗಡ್ಡೆ ನಾಕ್ಕೇಜಿ ಕೊಡಮ್ಮ

೩. ಎರಡು ಪಲ್ಲ ಬೀಮು ತಗಂಡ ವೋಗಬೇಕು

ಮಾರುಕಟ್ಟೆಗಳಲ್ಲಿ ವ್ಯಾಪಾರಿಗಳು ಬಹುಭಾಷಿಕರಾಗಿರುತ್ತಾರೆ. ಮ್ಯಾಸನಾಯಕರು ಯಾವ ಭಾಷೆಯಲ್ಲಿ ಮಾತನಾಡಿದರು ಸಹ ಅವರು ಪ್ರತಿಕ್ರಿಯೆಯನ್ನು ನೀಡುತ್ತಾರೆ. ಈ ಮೇಲಿನ ವಾಕ್ಯಗಳಲ್ಲಿ ತೆಲುಗಿನ ಪ್ರಭಾವ ಬೀರಿರುವುದು ಕಂಡುಬರುತ್ತದೆ.

**ಮ್ಯಾಸನಾಯಕರು ತಮ್ಮ ವ್ಯವಹಾರಿಕ ಕನ್ನಡದಲ್ಲಿ ತರಕಾರಿಗಳನ್ನು ಸಂಬೋಧಿಸುವ ಕ್ರಮ**

| ಶಿಷ್ಟ ಕನ್ನಡ | ಮ್ಯಾಸನಾಯಕರ ಕೌಟುಂಬಿಕ ಭಾಷೆ |
|---|---|
| ಈರುಳ್ಳಿ | ಉಳ್ಳ್ಪಿ ಗಡ್ಡೆ |
| ಬೆಳ್ಳುಳ್ಳಿ | ಬೆಳ್ಳಗಡ್ಡೆ |
| ಕುಂಬಳಕಾಯಿ | ಗುಮಡಕಾಯಿ |
| ಹೀರೆಕಾಯಿ | ಬೀರಕಾಯಿ |
| ತೆಂಗಿನಕಾಯಿ | ಟೆಂಕಾಯಿ |
| ಬೇಳೆ | ಬ್ಯಾಡ್ಲು |
| ಆಲುಗಡ್ಡೆ | ಉರ್ಲುಗಡ್ಡೆ |
| ಮಾವಿನಕಾಯಿ | ಮಾಮಿಡಿಕಾಯಿ |

ಮುಂತಾದ ಪದಗಳು ವ್ಯಾಸನಾಯಕರ ಕನ್ನಡದಲ್ಲಿ ಬಳಕೆಯಾಗುತ್ತವೆ. ವಿದ್ಯಾವಂತ ಪುರುಷರು ಮತ್ತು ಮಹಿಳೆಯರು ಸ್ಪಷ್ಟವಾಗಿ ಕನ್ನಡ ಮಾತನಾಡುತ್ತಾರೆ. ಮ್ಯಾಸನಾಯಕ ಜನಾಂಗದ ರೈತರು ತಾವು ಬೆಳೆದ ದವಸ ಧಾನ್ಯಗಳನ್ನು ನಗರ ಪ್ರದೇಶಗಳಿಗೆ ಸರಬರಾಜು ಮಾಡುವ ಸಂದರ್ಭದಲ್ಲಿ ಮತ್ತು ಮಾರುಕಟ್ಟೆಯಲ್ಲಿರುವ ವ್ಯಾಪರಸ್ಥರ, ದಲ್ಲಾಳಿಗಳ ಮತ್ತು ಮಾಲಿಕರ ಹತ್ತಿರ ಕನ್ನಡವನ್ನು ಮಾತನಾಡುವದನ್ನು ಕಾಣಬಹುದು. ಇವರು ಅಲೆದಾಡುವ ಪ್ರದೇಶಗಳು ದ್ವಿಭಾಷಿಕ ಪರಿಸರವನ್ನು ಹೊಂದಿವೆ. ಚಳ್ಳಕೆರೆ, ಮೊಳಕಾಲ್ಮೂರು, ಬಳ್ಳಾರಿ, ಆಂಧ್ರಪ್ರದೇಶದ ರಾಯದುರ್ಗ, ಈ ಸ್ಥಳಗಳಲ್ಲಿ ಎರಡು ಭಾಷೆಗಳನ್ನು ಮಾತನಾಡುತ್ತಾರೆ. ಬಟ್ಟೆ ಜವಳಿ, ಹೋಟೆಲ್ ಗಳಲ್ಲಿ, ಆಸ್ಪತ್ರೆಗಳಲ್ಲಿ, ಬಸ್ ನಿಲ್ದಾಣಗಳಲ್ಲಿ ಮ್ಯಾಸನಾಯಕ ಜನಾಂಗದವರು ವ್ಯವಹಾರಕ್ಕಾಗಿ ಕನ್ನಡಭಾಷೆಯನ್ನು ಬಳಸುವುದು ಕಂಡುಬರುತ್ತದೆ.

**೩.ಸಂಬೋಧನಾ ರೂಪಗಳು**

ಮ್ಯಾಸನಾಯಕರ ವ್ಯವಹಾರಿಕ ವಲಯದಲ್ಲಿ ಸಂಬೋಧನ ರೂಪಗಳು ಜಾತಿ, ವರ್ಗ, ಲಿಂಗ, ವಯಸ್ಸ ನ್ನಾಧರಿಸಿ ಬಳಕೆಯಾಗುತ್ತವೆ. ಕೌಟುಂಬಿಕ ವಲಯದಲ್ಲಿ ಅವರ ಮಾತೃಭಾಷೆಯಾದ ತೆಲುಗಿನಲ್ಲಿ ಕುಟುಂಬದ ಸದಸ್ಯರ ಅವಳಿ ಸಂಬಂಧಗಳನ್ನು ಕುರಿತು ಸಂಬೋಧನ ರೂಪಗಳು ಬಳಕೆಯಾಗುತ್ತವೆ. ಆದರೆ ವ್ಯವಹಾರಿಕ ವಲಯದಲ್ಲಿ ಸಮಾಜದಲ್ಲಿನ ಉನ್ನತವರ್ಗದವರ, ಅಧಿಕಾರಿಗಳ, ನೆರೆ ಹೊರೆ ಸಮುದಾಯದವರೊಂದಿಗೆ ವ್ಯವಹರಿಸುವ ಸಂದರ್ಭದಲ್ಲಿ ಕನ್ನಡದ ಸಂಬೋಧನ ರೂಪಗಳನ್ನು ಬಳಸುತ್ತಾರೆ. ಸಾಮಾನ್ಯವಾಗಿ ಸಮಾಜದಲ್ಲಿ ಉನ್ನತ ವರ್ಗದವರನ್ನು ಸಂಬೋಧಿಸುವ ಸಂದರ್ಭದಲ್ಲಿ ಗೌರವಸೂಚಕ ಪದಗಳನ್ನು ಬಳಸುತ್ತಾರೆ. ಉದಾಹರಣೆಗೆ ಕೆಲವೊಂದು ವಾಕ್ಯಗಳನ್ನು ಗಮನಿಸಬಹುದು.

೧. ಗೌಡರು ಮಾನ್ಯಾಗ ಆಯಿದಾರನೆಮ್ಮ

೨. ಗೂಂಚಿಕಾರ ಊರಿಗೆ ವೋಗಿದ್ದಾರೆ.

೩. ಸಾವುಕಾರ ರೊಕ್ಕ ಕೊಡ್ರಿ

೪. ದಣಿ ವಲದಲ್ಲಿ ಕೆಲಸ ಮಾಡುವುದಕ್ಕೆ ವೋಗು ಎಂದು ಏಳಿದನು

೫. ಗೌಡಸಾನಿ ನಾಳೆ ಕೆಲಸಕ್ಕೆ ಬರದಿಲ್ಲ

ಮ್ಯಾಸನಾಯಕ ಸಮುದಾಯದವರು ಶ್ರೀಮಂತವರ್ಗ ಮತ್ತು ಉನ್ನತವರ್ಗದವರ ಜೊತೆಗೆ ವ್ಯವಹಾರಿಸುವ ಸಂದರ್ಭದಲ್ಲಿ ಬಹುವಚನ ಮತ್ತು ಗೌರವಾರ್ಥ ಪದಗಳಾದ ಗೌಡರು, ಗೊಂಚಿಕಾರ, ಸಾಹುಕಾರ, ದಣಿ ಮುಂತಾದ ಪದಗಳಿಂದ ಸಂಬೋಧಿಸುವುದು ಮೇಲಿನ ವಾಕ್ಯಗಳಿಂದ ತಿಳಿದುಬರುತ್ತದೆ.

**ಅಧಿಕಾರಿಗಳೊಂದಿಗೆ ಸಂಬೋಧಿಸುವ ಸಂಬೋಧನಾ ರೂಪಗಳು**

ವ್ಯವಹಾರಿಕ ವಲಯಗಳಾದ ಕಛೇರಿ, ನ್ಯಾಯಾಲಯ, ಶಾಲಾ ಕಾಲೇಜುಗಳಲ್ಲಿ ಬಳಸುವ ಸಂಬೋಧನಾ ರೂಪಗಳು ಬಹುವಚನ ಮತ್ತು ಗೌರವ ಸೂಚಕ ಪದಗಳಿಂದ ಕೂಡಿರುತ್ತವೆ. ಮ್ಯಾಸನಾಯಕರು ಸಹ ಇವರನ್ನು ಸಂಬೋಧಿಸುವ ಸಮಯದಲ್ಲಿ ಸ್ವಾಮಿ, ಸರ್, ಸಾಹೇಬರು, ಮೇಷ್ಟ್ರು ಮುಂತಾದ ಪದಗಳಿಂದ ಸಂಬೋಧಿಸುತ್ತಾರೆ. ಸರ್ವಸಾಮಾನ್ಯವಾಗಿ ಎಲ್ಲ ಸಮುದಾಯದವರು ಅಧಿಕಾರಿಗಳಿಗೆ ಗೌರವ ಸೂಚಕ ಪದಗಳನ್ನು ಬಳಸುತ್ತಾರೆ. ಆದರೆ ಅಧಿಕಾರಿಗಳು ತನಗಿಂತ ಕೆಳ ದರ್ಜೆಯಲ್ಲಿರುವ ವ್ಯಕ್ತಿಗಳನ್ನು ಮತ್ತು ಸಾಮಾನ್ಯ ವ್ಯಕ್ತಿಗಳನ್ನು ಏಕವಚನ ಅಥವಾ ಹೆಸರಿನಿಂದ ಸಂಬೋಧಿಸುವುದು ಕಂಡುಬರುತ್ತದೆ. ಭಾಷೆಯು ಸಹ ಸಾಮಾಜಿಕ ಸ್ತರಗಳ ನಿಯಮಗಳನುಸಾರವಾಗಿ ಬಳಕೆಯಾಗುತ್ತದೆ.

ಉದಾ : ಸ್ವಾಮಿ ನಮ್ ವೂರಿನ್ಯಾಗ ಮಳೆ ಬಂದು ಸ್ಯಾಲೆ ಬಿದ್ದೈತೆ

ಸರ್ ನಮ್ ದನಗಳಿಗೆ ಬಾಳ ಸುಸ್ತಾಗೈತೆ

ಮ್ಯಾಸನಾಯಕ ಸಮುದಾಯಲ್ಲಿ ಅನಕ್ಷರಸ್ಥರಲ್ಲಿ ಸ್ವಾಮಿ, ಸರ್ ಎಂದು ಸಂಬೋಧಿಸುವುದೇ ಹೆಚ್ಚಾಗಿ ಕಂಡುಬರುತ್ತದೆ. ಆದರೆ ವಿದ್ಯಾವಂತರಲ್ಲಿ ಸಾಹೇಬರು, ಸರ್, ಮುಂತಾದ ಪದಗಳು ಹೆಚ್ಚಾಗಿ ಬಳಕೆಯಾಗುತ್ತವೆ.

ಮ್ಯಾಸನಾಯಕರು ದೇವಾಲಯದ ಮಠಗಳಲ್ಲಿನ ಧರ್ಮಾಧಿಕಾರಿಗಳನ್ನು ಸಂಬೋಧಿಸುವ ಸಂದರ್ಭದಲ್ಲಿ ಏಕವಚನ ಮತ್ತು ಹೆಸರಿನಿಂದ ಸಂಬೋಧಿಸುವುದು ಕಂಡುಬರುವುದಿಲ್ಲ. ಅವರನ್ನು ಕನ್ನಡ ಭಾಷೆಯಲ್ಲಿ ಸ್ವಾಮಿಗಳು, ತಾತನವರು, ಪೂಜಾರಪ್ಪ ಮುಂತಾದ ಪದಗಳಿಂದ ಸಂಬೋಧಿಸುವುದು ಕಂಡುಬರುತ್ತದೆ. ಆದರೆ ಪೂಜಾರಿಗಳು ಮತ್ತು ಸ್ವಾಮಿಗಳು ಭಕ್ತರನ್ನು ಏಕವಚನ ಮತ್ತು ಹೆಸರಿನಿಂದ ಕರೆಯುವುದು ಸಂಬೋಧಿಸುವುದು ಸಾಮಾನ್ಯವಾಗಿ ಎಲ್ಲಾ ಸಮುದಾಯಗಳಲ್ಲಿ ಕಂಡುಬರುತ್ತದೆ. ಜನರಿಗೆ ಸಾಮಾಜಿಕ ಮೌಲ್ಯಗಳನ್ನು ಮತ್ತು ನೀತಿ ನಿಯಮಗಳನ್ನು ತುಂಬಿ ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುತ್ತಾರೆ ಎಂಬ ಭಾವನೆ ಭಕ್ತರಲ್ಲಿ

ಬೆಳೆದಿರುತ್ತದೆ. ಆದ್ದರಿಂದ ಅವರನ್ನು ಗೌರವ ಸೂಚಕ ಪದಗಳೊಂದಿಗೆ ಸಂಬೋಧಿಸುತ್ತಾರೆ. ಅದೇ ರೀತಿಯಾಗಿ ಮ್ಯಾಸನಾಯಕರು ಸಮಾಜದಲ್ಲಿನ ರಾಜಕೀಯ ವ್ಯಕ್ತಿಗಳನ್ನು ಸಂಬೋಧಿಸುವ ಸಂದರ್ಭದಲ್ಲಿ ಹೆಸರಿನಿಂದ ಕರೆಯುವ ರೂಢಿಯಿಲ್ಲ. ಅವರಿಗೆ ಗೌರವ ಸೂಚಕ ಪದಗಳಾದ ಸರ್, ಸಾಹೇಬ, ಸ್ವಾಮಿ ಮುಂತಾದ ಪದಗಳಿಂದ ಸಂಬೋಧಿಸುತ್ತಾರೆ. ಅಪರಿಚಿತ ವ್ಯಕ್ತಿಗಳನ್ನು ಪರಿಚಯ ಮಾಡಿಕೊಳ್ಳುವ ಸಮಯದಲ್ಲಿ ವಯಸ್ಸಿಗೆ ಅನುಗುಣವಾಗಿ ತಾತ, ಅವ್ವ, ತಂಗಿ, ತಮ್ಮ, ಅಕ್ಕ, ಅಣ್ಣ ಇತ್ಯಾದಿ ಸಂಬಂಧ ವಾಚಕಗಳಿಂದ ಸಂಬೋಧಿಸುವುದನ್ನು ಕಾಣಬಹುದು. ಬೇರೆ ಸಮುದಾಯದವರ ಜೊತೆ ಯಾವುದೇ ಕಾರಣದಿಂದ ಜಗಳವಾದಾಗ ಕನ್ನಡದಲ್ಲಿ ಬೈಯುವುದು ಕಂಡುಬರುತ್ತದೆ. ಸೂಳೆಮಗನೆ, ನಿನ್ನ ಅಕ್ಕ ನಿನ್ನ ಎಣ್ತಿ, ನಿಮ್ಮಮ್ಮನ ಮುಂತಾದ ಅಶ್ಲೀಲ ಪದಗಳಿಂದ ಬೈಯುವುದು ಕಂಡುಬರುತ್ತದೆ.

**ಅಡಿಟಿಪ್ಪಣಿಗಳು**

೧. ಎಂ.ಭಾಗ್ಯಲಕ್ಷ್ಮಿ, ಬಳ್ಳಾರಿ ಪರಿಸರದ ಕನ್ನಡ-ತೆಲುಗು ದ್ವಿಭಾಷಿಕತೆ : ಸಮಾಜೋಭಾಷಿಕ ಅಧ್ಯಯನ (ಅಪ್ರಕಟಿತ ಪಿಎಚ್.ಡಿ. ಪ್ರಬಂಧ), ೨೦೦೨, ಪು. ೨೦

೨. ಎಸ್.ಎಸ್.ಅಂಗಡಿ, ಸಂಬಂಧವಾಚಕಗಳು ಮತ್ತು ಸಂಬೋಧನಾ ರೂಪಗಳು, ೨೦೦೨, ಪು. ೫

೩. ಅದೇ, ಪು. ೨೩

೪. ಕೆ.ವಿ.ನಾರಾಯಣ, ನಮ್ಮ ಕನ್ನಡ ಹೊನ್ನಸಂಚಿಕೆ, ೨೦೦೧, ಪು. ೩೫

೫. ಎಸ್.ಎಸ್.ಅಂಗಡಿ, ಸಂಬಂಧವಾಚಕಗಳು ಮತ್ತು ಸಂಬೋಧನಾ ರೂಪಗಳು, ೨೦೦೨, ಪು. ೯

೬. ಕೆ.ವಿ.ನಾರಾಯಣ, ಭಾಷೆ - ವಿಶ್ವಕೋಶ - ೧, ೨೦೦೦, ಪು. ೧೦೧



# ೪

# ಮ್ಯಾಸನಾಯಕರ ಕನ್ನಡ ಮತ್ತು ತೆಲುಗು ಭಾಷೆ

೧. ಪ್ರವೇಶ

೨. ಮ್ಯಾಸನಾಯಕರ ಕೌಟುಂಬಿಕ ತೆಲುಗು ಭಾಷೆಯ ಮೇಲೆ ಕನ್ನಡದ ಪ್ರಭಾವ

೩. ಮ್ಯಾಸನಾಯಕರ ವ್ಯವಹಾರಿಕ ಕನ್ನಡ ಭಾಷೆಯ ಮೇಲೆ ತೆಲುಗಿನ ಪ್ರಭಾವ

೪. ನುಡಿಬೆರಕೆ ಮತ್ತು ನುಡಿಪಲ್ಲಟ

೫. ಭಾಷಾ ಮನೋಭಾವ ಮತ್ತು ನಡವಳಿಕೆ

೬. ಭಾಷಾ ಸಂಗೋಪನಾ ಪ್ರಕ್ರಿಯೆ

೪

# ಮ್ಯಾಸನಾಯಕರ ಕನ್ನಡ ಮತ್ತು ತೆಲುಗು ಭಾಷೆ

## ೧. ಪ್ರವೇಶ

ಸಮಾಜದಲ್ಲಿ ಭಾಷೆಯಿಲ್ಲದ ಸಮುದಾಯವನ್ನು ಕಲ್ಪಿಸಿಕೊಳ್ಳುವುದು ಕೂಡ ಅಸಾಧ್ಯ. ಒಂದು ಸಮುದಾಯವು ತನ್ನದೇ ಆದ ಜೀವಂತ ಭಾಷೆಯನ್ನು ಒಳಗೊಂಡಿರುತ್ತದೆ. ಸಮುದಾಯಗಳು ಒಂದೆಡೆಯಿಂದ ಮತ್ತೊಂದು ಕಡೆ ವಲಸೆ ಹೋದರೆ ಅಲ್ಲಿನ ಭಾಷೆಯನ್ನು ಅವಶ್ಯಕವಾಗಿ ಕಲಿಯಬೇಕಾಗುತ್ತದೆ. ಒಂದು ಭಾಷಿಕ ಸಮುದಾಯದ ಜನರು ಮತ್ತೊಂದು ಭಾಷಿಕ ಸಮುದಾಯದ ಪ್ರದೇಶದಲ್ಲಿ ಜೀವನ ಮಾಡುವ ಅನಿವಾರ್ಯತೆ ಬಂದಾಗ ಅಲ್ಲಿನ ಭಾಷಾ ಸಂಪರ್ಕದಿಂದಾಗಿ ಮತ್ತು ಸಾಮಾಜಿಕ ಸಂದರ್ಭಗಳಿಂದಾಗಿ ಒಂದು ಭಾಷೆಯನ್ನು ಬಲ್ಲ ಜನರು ಇನ್ನೊಂದು ಭಾಷೆಯನ್ನು ಕಲಿಯುವುದು ಅನಿವಾರ್ಯವಾಗುತ್ತದೆ. ಹಲವಾರು ಸಾಮಾಜಿಕ ವ್ಯವಹಾರಗಳನ್ನು ನಡೆಸಲು ವೃತ್ತಿ ಜೀವನವನ್ನು ನಿರ್ವಹಿಸಲು ವ್ಯಕ್ತಿಗಳು ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿತು ಬಳಸಬೇಕಾದ ಸಂದರ್ಭಗಳು ನಿರ್ಮಾಣವಾಗುತ್ತವೆ.

ಮೊಳಕಾಲ್ಮೂರು ಪ್ರದೇಶದಲ್ಲಿ ನೆಲೆಸಿರುವ ಮ್ಯಾಸನಾಯಕ ಜನಾಂಗದವರು ದ್ವಿಭಾಷಿಕರಾಗಿದ್ದಾರೆ. ಅವರ ಕೌಟುಂಬಿಕ ವಲಯದ ಭಾಷೆ ತೆಲುಗು ಮತ್ತು ವ್ಯವಹಾರಿಕ ಭಾಷೆ ಕನ್ನಡವಾಗಿದೆ. ಇವರು ಎರಡೂ ಭಾಷೆಗಳನ್ನು ಬಳಸುವುದರಿಂದ ಒಂದು ಭಾಷೆಯ ಮೇಲೆ ಮತ್ತೊಂದು ಭಾಷೆಯ ಪ್ರಭಾವ ಬೀರುವುದು ಸಾಮಾನ್ಯವಾದ ಲಕ್ಷಣ. ಎರಡು ಭಾಷೆಗಳು ತಮ್ಮ ತೆರಪುಗಳನ್ನು ತುಂಬಿಕೊಳ್ಳಲು ಕೊಡುಕೊಳ್ಳುವಿಕೆಯ ಪ್ರಕ್ರಿಯೆಯನ್ನು ಕಾಣಬಹುದು. ಇವರ ಕೌಟುಂಬಿಕ ಮತ್ತು ವ್ಯವಹಾರಿಕ ಭಾಷೆಯ

ಕೆಲವೊಂದು ವಲಯಗಳ, ಪದಗಳ ಮಟ್ಟದಲ್ಲಿ ಭಾಷೆಗಳ ಪ್ರಭಾವವನ್ನು ಕಾಣಬಹುದು. ದೇಹಕ್ಕೆ ಸಂಬಂಧಿಸಿದ ಪದಗಳು ಸಂಬಂಧ ವಾಚಕಗಳು ನಿತ್ಯೋಪಯೋಗಿ, ಗೃಹೋಪಯೋಗಿಗಳಿಗೆ ಸಂಬಂಧಿಸಿದ ಪದಗಳು ಮತ್ತು ಸೊಪ್ಪು ತರಕಾರಿ ಹಣ್ಣುಹಂಪಲಕ್ಕೆ ಸಂಬಂಧಿಸಿದ ಪದಗಳು, ಕ್ರಿಯಾಪದ, ಗುಣವಾಚಕ, ಸಂಖ್ಯಾವಾಚಕಕ್ಕೆ ಸಂಬಂಧಿಸಿದ ಪದಗಳನ್ನು ಅನುಲಕ್ಷಿಸಿ ವಿವರಣೆಯನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ.

ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯ ಪ್ರಕಾರ ಕೆಲವೊಂದು ಪದಗಳನ್ನು ಕುರಿತು ವಿವರಿಸಲಾಗಿದೆ ಮ್ಯಾಸನಾಯಕರ ಮಾತೃಭಾಷೆಯಲ್ಲಿ ಕೆಲವೊಂದು ವಿಶೇಷ ಪದಗಳ ವಿವರಣೆ ನೀಡಲಾಗಿದೆ. ನುಡಿಬೆರಕೆ ಮತ್ತು ನುಡಿಜಿಗಿತ ಪ್ರಕ್ರಿಯೆಗಳನ್ನು ಮತ್ತು ಸಂಗೋಪನ ಪ್ರಕ್ರಿಯೆ, ಭಾಷಾ ನಡವಳಿಕೆಯನ್ನು ಕುರಿತು ವಿವರಿಸಲಾಗುವುದು.

## ೨. ಮ್ಯಾಸನಾಯಕರ ತೆಲುಗು ಭಾಷೆಯ ಮೇಲೆ ಕನ್ನಡದ ಪ್ರಭಾವ

ಮ್ಯಾಸನಾಯಕರ ಕೌಟುಂಬಿಕ ವಲಯದ ಭಾಷೆ ತೆಲುಗು ಆಗಿದೆ. ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಪ್ರಾದೇಶಿಕತೆಯ ಅನಿವಾರ್ಯತೆ ಕಾರಣಗಳಿಂದ ತೆಲುಗಿನ ಮೇಲೆ ಕನ್ನಡ ಪ್ರಭಾವ ಬೀರಿರುವುದನ್ನು ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯಿಂದ ವಿಶ್ಲೇಷಿಸಲಾಗಿದೆ. ಕೆಲವೊಂದು ವಲಯಗಳಲ್ಲಿ ಪದಗಳನ್ನು ಅನುಲಕ್ಷಿಸಿ ಕನ್ನಡದ ಪ್ರಭಾವವನ್ನು ಗುರ್ತಿಸಲಾಗಿದೆ. ದೇಹದ ಅಂಗಾಂಗಳಿಗೆ ಸಂಬಂಧಿಸಿದ ಪದಗಳು ಸಂಬಂಧವಾಚಕಗಳು, ಗುಣವಾಚಕ ಪದಗಳು, ಕ್ರಿಯಾಪದಗಳು ಹಾಗೂ ಹಣ್ಣು ಹಂಪಲಕ್ಕೆ ಸಂಬಂಧಿಸಿದ ಪದಗಳನ್ನು ವಿಶ್ಲೇಷಿಸಲಾಗಿದೆ.

### ೧. ದೇಹದ ಅಂಗಾಂಗಳಿಗೆ ಸಂಬಂಧಿಸಿದ ಪದಗಳ ಮೇಲೆ ಕನ್ನಡದ ಪ್ರಭಾವ

| ಶಿಷ್ಟಕನ್ನಡ | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು | ಪ್ರಯೋಗಗಳು ಮತ್ತು ವಿವರಣೆ |
|---|---|---|---|
| ೧. ಉಗುರು | ಉಗುರು | ಗೊರ್ರು | ಶಿಷ್ಟ ತೆಲುಗಿನ 'ಗೊರ್ರು' ಎನ್ನುವ ಪದವು ಮ್ಯಾಸನಾಯಕರ ತೆಲುಗಿನಲ್ಲಿ 'ಉಗುರು' ಎಂದು ಬಳಕೆಯಾಗುತ್ತದೆ. ಕನ್ನಡದ 'ಉಗುರು' ಎನ್ನುವ ಪದ ಹಾಗೇ ಉಳಿದು ಕೊಂಡು ಬಂದಿದೆ.<br>ಉದಾ:<br>ಮ್ಯಾ.ತೆ. : ಉಗುರುಸುತ್ತನೇಸನಿದನಿಕೆ ಸ್ಯೆಯಿಬಾಳಮು ನೊಪ್ಪೆದೆ. |

| | | | | |
|---|---|---|---|---|
| | | | | ಕನ್ನಡ : ಉಗುರು ಸುತ್ತು ಎದಿದ್ದರಿಂದ ಕೈಯಿ ಬಹಳ ನೋವಾಗಿದೆ. |
| ೨. | ಕತ್ತು | ಕುತ್ತಗ | ಗೊಂತ / ಮೆಡ | ಶಿಷ್ಟ ತೆಲುಗಿನಲ್ಲಿ 'ಮೆಡ' ಎನ್ನುವ ಪದದ ಬದಲು ಮ್ಯಾಸನಾಯಕರ ತೆಲುಗಿನಲ್ಲಿ ಕುತ್ತಗ ಎಂದು ಬಳಕೆಯಾಗಿದೆ. ಶಿಷ್ಟ ಕನ್ನಡದಲ್ಲಿ ಕತ್ತು ಎಂದು ಬಳಕೆಯಾಗುತ್ತದೆ. ಕತ್ತು ಎನ್ನುವ ಪದದ ರೂಪವೇ ಕುತ್ತುಗ ಇರ ಬಹುದು.<br>ಉದಾ :<br>ಮ್ಯಾ.ತೆ.: ಕುತ್ತಗ ಮೀದ ಮೊನ್ನು ಉಂಡುದೆ<br>ಕನ್ನಡ : ಕುತ್ತಿಗೆಯ ಮೇಲೆ ಮಣ್ಣಿದೆ |
| ೩. | ಬೆನ್ನು | ಬೆನ್ನು | ವೀಪು | ಶಿಷ್ಟ ತೆಲುಗಿನ 'ವೀಪು' ಎನ್ನುವ ಪದವು ಮ್ಯಾಸನಾಯಕರ ತೆಲುಗಿನಲ್ಲಿ ಕನ್ನಡ ಪದ 'ಬೆನ್ನು' ಬಳಕೆಯಾಗುತ್ತದೆ.<br>ಉದಾ :<br>ಮ್ಯಾ.ತೆ. : ನಾಕಿ ಸ್ಯಾನ ಬೆನ್ನು ನೊಪ್ಪೈದೆ<br>ಕನ್ನಡ : ನನಗೆ ಬಹಳ ಬೆನ್ನು ನೋವಿದೆ |
| ೪. | ಬೆರಳು | ಬೊಳ್ಳು | ವೇಲು | ಶಿಷ್ಟ ತೆಲುಗಿನ 'ವೇಲು' ಎನ್ನುವ ಪದವು ಮ್ಯಾಸನಾಯಕರ ತೆಲುಗಿನಲ್ಲಿ ಬೊಳ್ಳು ಎಂದು ಬಳಕೆಯಾಗುತ್ತದೆ. ಕನ್ನಡದ ಆಡುನುಡಿಯಲ್ಲಿ ಬೊಳ್ಳು ಎಂದು ಪ್ರಯೋಗವಾಗುವುದು ಕಂಡು ಬರುತ್ತದೆ. ಶಿಷ್ಟಕನ್ನಡ ಪದಾದಿಯ 'ಎ' ಕಾರವು 'ಒ'ಕಾರವಾಗಿ 'ರ' ಕಾರವು ಲೋಪ ಗೊಂಡಿದೆ. 'ಳ'ದಿತ್ವವು ಆದೇಶವಾಗಿ ಬಂದಿರು ವುದು ಇಲ್ಲಿಯ ವೈಶಿಷ್ಟ್ಯವಾಗಿದೆ.<br>ಉದಾ : |

ಮ್ಯಾ.ತೆ. : ಬೊಳ್ಳು ಮೀದ ರಾಯಿ ಪೊಡಿ ಬೊಳ್ಳು ತುಂಡ್ಯೆದೆ

ಕನ್ನಡ : ಬೆರಳಿನ ಮೇಲೆ ಕಲ್ಲುಬಿದ್ದು ಬೆರಳು ತುಂಡಾಗಿದೆ.

ದೇಹದ ಅಂಗಾಂಗಳಿಗೆ ಸಂಬಂಧಿಸಿದ ಪದಗಳ ಮೇಲೆ ಕನ್ನಡದ ಪ್ರಭಾವವನ್ನು ಮೇಲಿನಂತೆ ಗಮನಿಸಬಹುದು. ಇವರು ವಲಸೆ ಬಂದಂತಹ ಜನಾಂಗವಾಗಿದ್ದರಿಂದ ಹಲವಾರು ಶತಮಾನಗಳ ಕಾಲ ಕನ್ನಡದ ಪರಿಸರದಲ್ಲಿ ನೆಲೆಗೊಂಡಿದ್ದರಿಂದ ಸಾಮಾನ್ಯವಾಗಿ, ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಶೈಕ್ಷಣಿಕ ಕಾರಣಗಳಿಂದ ಈ ಜನಾಂಗದ ಮೆಲೆ ಕನ್ನಡದ ಪ್ರಭಾವ ಬೀರುವ ಸಾಧ್ಯತೆಯಿದೆ.

**೨. ಹಣ್ಣು ಹಂಪಲಗಳಿಗೆ ಸಂಬಂಧಿಸಿದ ಪದಗಳ ಮೇಲೆ ಕನ್ನಡದ ಪ್ರಭಾವ**

| | ಶಿಷ್ಟಕನ್ನಡ | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು | ಪ್ರಯೋಗಗಳು ಮತ್ತು ವಿವರಣೆ |
|---|---|---|---|---|
| ೧. | ಕಲ್ಲಂಗಡಿ | ಕಲ್ಲಂಗಡಿ | ಕಲ್ಲಂಗರಿ | ಶಿಷ್ಟಕನ್ನಡದ 'ಕಲ್ಲಂಗಡಿ' ಎನ್ನುವ ಪದವು ಮ್ಯಾಸನಾಯಕರ ತೆಲುಗಿನಲ್ಲಿ ಕಲ್ಲಂಗಡಿ ಎಂದು ಬಳಕೆಯಾಗುತ್ತದೆ. ಶಿಷ್ಟ ತೆಲುಗಿನಲ್ಲಿ ಕಲ್ಲಂಗರಿ ಎಂದು ಬಳಕೆಯಾಗುತ್ತದೆ.<br>ಉದಾ:<br>ಮ್ಯಾ.ತೆ.: ಕಲ್ಲಂಗಡಿ ಪಂಡು ತಿಂಟೇ ವಡ್ಲು ಸಲ್ಲಗ ಉಂಟುದೆ<br>ಕನ್ನಡ: ಕಲ್ಲಂಗಡಿ ಹಣ್ಣು ತಿಂದರೆ ಹೊಟ್ಟೆ ತಂಪಾಗಿ ಇರುತ್ತದೆ. |
| ೨. | ಬಾಳೆಹಣ್ಣು | ಬಾಳೆಪಂಡು | ಅರಟಿಪಂಡು | ಶಿಷ್ಟತೆಲುಗಿನಲ್ಲಿ 'ಅರಟಿಪಂಡು' ಎನ್ನುವ ಪದವು ಮ್ಯಾಸನಾಯಕರ ತೆಲುಗಿನಲ್ಲಿ 'ಬಾಳೆ ಪಂಡು' ಎಂದು ಬಳಕೆಯಾಗುತ್ತಿದೆ. 'ಬಾಳೆ' ಎನ್ನುವ ಕನ್ನಡ ಪದಕ್ಕೆ 'ಪಂಡು' ಎನ್ನುವ ತೆಲುಗುರೂಪ ಸೇರಿಕೊಂಡು 'ಬಾಳೆಪಂಡು' ಎಂದು ಬಳಕೆಗೊಳ್ಳುತ್ತದೆ. ಇಲ್ಲಿ ನುಡಿಬೆರಕೆ |

| | | | | |
|---|---|---|---|---|
| | | | | ಪ್ರಕ್ರಿಯೆ ನಡೆದಿರುವುದು ಇಲ್ಲಿಯ ವೈಶಿಷ್ಟ್ಯವಾಗಿದೆ.<br>ಉದಾ :<br>ಮ್ಯಾ.ತೆ.: ಒಕ ಡಜನ್ ಬಾಳೆಪಂಡ್ಲು ಎಟ್ಲಾ?<br>ಕನ್ನಡ : ಒಂದು ಡಜನ್ ಬಾಳೆಹಣ್ಣು ಎಷ್ಟು? |
| ೩. | ಬೆಳ್ಳುಳ್ಳಿ | ಬೆಳ್ಳಗಡ್ಡೆ | ಉಲಿಪಾಯಿಲು | ಶಿಷ್ಟತೆಲುಗಿನ 'ಉಲಿಪಾಯಿಲು' ಎನ್ನುವ ಪದವು ಮ್ಯಾಸನಾಯಕರ ತೆಲುಗಿನಲ್ಲಿ 'ಬೆಳ್ಳಾಗಡ್ಡೆ' ಎಂದು ಪ್ರಯೋಗ ಮಾಡುತ್ತಾರೆ. ಕನ್ನಡದಲ್ಲಿ 'ಬೆಳ್ಳುಳ್ಳಿ' ಎಂದು ಬಳಕೆಯಾಗುತ್ತದೆ. ಮೊಳಕಾಲ್ಮೂರು ಪ್ರದೇಶದ ಪೂರ್ವ ಮತ್ತು ಉತ್ತರ ದಿಕ್ಕಿನಲ್ಲಿ 'ಎಲ್‌ಗಡ್ಡ' ಎಂದು ಬಳಕೆಯಲ್ಲಿದೆ. ದಕ್ಷಿಣ ಮತ್ತು ಪಶ್ಚಿಮಕ್ಕೆ ಬೆಳ್ಳಗಡ್ಡ ಎಂದು ಕರೆಯುತ್ತಾರೆ.<br>ಉದಾ :<br>ಮ್ಯಾ.ತೆ. : ಮಾ ತ್ವಾಟಲಾನ ಬೆಳ್ಳಗಡ್ಡಲು ಬೆಳಸೆಮಿ<br>ಕನ್ನಡ : ನಮ್ಮ ತೋಟದಲ್ಲಿ ಬೆಳ್ಳುಳ್ಳಿ ಬೆಳೆಸಿದ್ದೇವೆ. |
| ೪. | ಹಲಸು | ಅಲ್ಸು | ಪನಸು | ಶಿಷ್ಟತೆಲುಗಿನಲ್ಲಿ 'ಪನಸು' ಎನ್ನುವ ಪದವು ಮ್ಯಾಸನಾಯಕರ ತೆಲುಗಿನಲ್ಲಿ 'ಅಲ್ಸು' ಎಂದು ಪ್ರಯೋಗವಾಗುತ್ತದೆ. ಶಿಷ್ಟಕನ್ನಡದಲ್ಲಿ 'ಹಲಸು' ಎಂದು ಬಳಕೆಯಲ್ಲಿದೆ. ಈ ಪ್ರದೇಶದ ದಕ್ಷಿಣ ಮತ್ತು ಪಶ್ಚಿಮಕ್ಕೆ 'ಅಲ್ಸು' ಎಂದು ಉತ್ತರ ಪೂರ್ವಕ್ಕೆ ಪಲ್ಸು ಎಂದು ಬಳಕೆಗೊಳ್ಳುತ್ತಿದೆ.<br>ಉದಾ : |

ಮ್ಯಾ.ತೆ. : ಮಾ ಅಯ್ಯಾ ಊರಿನಿಂಟಿ ವಚ್ಚಪುಡು ಅಲ್ಲು ಪಂಡ್ಲು ಕಂಡೆಚ್ಚಡೆ

ಕನ್ನಡ : ನಮ್ಮ ಅಪ್ಪ ಊರಿನಿಂದ ಬರುವಾಗ ಹಲಸಿನ ಹಣ್ಣು ತಂದಿದ್ದಾನೆ.

೩. ಸಂಬಂಧವಾಚಕಗಳಿಗೆ ಸಂಬಂಧಿಸಿದ ಪದಗಳ ಮೇಲೆ ಕನ್ನಡದ ಪ್ರಭಾವ

| | ಶಿಷ್ಟಕನ್ನಡ | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು | ಪ್ರಯೋಗಗಳು ಮತ್ತು ವಿವರಣೆ |
|---|---|---|---|---|
| ೧. | ಅಜ್ಜಿ | ಅಬ್ಬ | ಅವ್ವ | ಶಿಷ್ಟತೆಲುಗಿನ 'ಅವ್ವ' ಎನ್ನುವ ಪದಕ್ಕೆ ಮ್ಯಾಸ ನಾಯಕರ ತೆಲುಗಿನಲ್ಲಿ 'ಅಬ್ಬ' ಎಂದು ಸಂಬೋಧಿಸುತ್ತಾರೆ. ಶಿಷ್ಟಕನ್ನಡದಲ್ಲಿ 'ಅಜ್ಜಿ' ಎಂದು ಸಂಬೋಧಿಸುತ್ತಾರೆ. 'ಅಬ್ಬ' ಎನ್ನುವ ಪದವು ಮೂಲತಃ ಕನ್ನಡದ ಪದವಾಗಿದ್ದು, ಕರ್ನಾಟಕದ ಇತರೆ ಪ್ರದೇಶಗಳಲ್ಲಿ ಬಳಕೆಯಲ್ಲಿದೆ. ಮೊಳಕಾಲ್ಮೂರು ಪ್ರದೇಶದ ಪೂರ್ವ ಮತ್ತು ಉತ್ತರಕ್ಕೆ 'ಅವ್ವ' ಎಂದು, ದಕ್ಷಿಣ, ಪಶ್ಚಿಮಕ್ಕೆ 'ಅಬ್ಬ' ಎಂದು ಸಂಬೋಧಿಸುತ್ತಾರೆ.<br>ಉದಾ :<br>ಮ್ಯಾ.ತೆ. : ಅಬ್ಬತಾ ಮುದ್ದತಾಗನಾಕಿ ಪಿಲಿ<br>ಕನ್ನಡ : ಅಜ್ಜಿಯನ್ನು ಊಟ ಮಾಡುವುದಕ್ಕೆ ಕರೆ |
| ೨. | ತಂಗಿ | ತಂಗಿ | ಚೆಲ್ಲಿ | ಶಿಷ್ಟತೆಲುಗಿನ 'ಚೆಲ್ಲಿ' ಎಂಬ ಪದಕ್ಕೆ ಮ್ಯಾಸ ನಾಯಕರ ತೆಲುಗಿನಲ್ಲಿ 'ತಂಗಿ' ಎಂದು ಸಂಬೋಧಿಸುತ್ತಾರೆ. ಶಿಷ್ಟ ಕನ್ನಡದ 'ತಂಗಿ' ಪದವು ಇವರ ತೆಲುಗಿನ ಮಧ್ಯೆ ಬಳಕೆಯಾಗಿರುವುದು ಕಂಡುಬರುತ್ತದೆ.<br>ಉದಾ : |

| | | | | |
|---|---|---|---|---|
| | | | | ಮ್ಯಾ.ತೆ. : ತಂಗಿ ಮೊಗುಡು ವಚ್ಚಡೆ<br>ಕನ್ನಡ : ತಂಗಿ ಗಂಡ ಬಂದಿದ್ದಾನೆ |
| ೩. | ತಾಯಿ | ಅಮ್ಮ / ಅವ್ವ | ತಲ್ಲಿ | ಶಿಷ್ಟಕನ್ನಡದ 'ತಾಯಿ' ಎಂಬ ಪದಕ್ಕೆ ಮ್ಯಾಸನಾಯಕರ ತೆಲುಗಿನಲ್ಲಿ 'ಅವ್ವ' ಎಂದು ಸಂಬೋಧಿಸುತ್ತಾರೆ. ಶಿಷ್ಟತೆಲುಗಿನಲ್ಲಿ 'ತಲ್ಲಿ' ಎಂಬ ಪದ ಬಳಕೆಯಲ್ಲಿದೆ. 'ಅವ್ವ' ಎನ್ನುವ ಪದವನ್ನು ಕರ್ನಾಟಕದ ಇತರೆ ಪ್ರದೇಶಗಳಲ್ಲಿ ತಾಯಿಗೆ ಸಂಬೋಧಿಸುವುದು ಕಂಡುಬರುತ್ತದೆ. ಮ್ಯಾಸನಾಯಕರು ಪೂರ್ವ ಮತ್ತು ಉತ್ತರದಿಕ್ಕಿನ ಪ್ರದೇಶದಲ್ಲಿ 'ಅಮ್ಮ' ಎಂದು ದಕ್ಷಿಣ ಮತ್ತು ಪಶ್ಚಿಮದ ಪ್ರದೇಶದಲ್ಲಿ 'ಅವ್ವ' ಎಂದು ಸಂಬೋಧಿಸುವುದು ವೈಶಿಷ್ಟ್ಯವಾಗಿದೆ.<br>ಉದಾ:<br>ಮ್ಯಾ.ತೆ. : ರಮೇಶುಡು ಅವ್ವತಾ ಪಿಲಿಚಿವಚ್ಚ<br>ಕನ್ನಡ : ರಮೇಶನು ತಾಯಿಯನ್ನು ಕರೆದು ಬಂದನು |
| ೪. | ಮದ್ಲಿಂಗ | ಮದ್ಲಿಂಗಡು | ಪೆಳ್ಳಿಕೊಡುಕು | ಶಿಷ್ಟತೆಲುಗಿನಲ್ಲಿ 'ಪೆಳ್ಳಿಕೊಡುಕು' ಎನ್ನುವ ಪದಕ್ಕೆ ಮ್ಯಾಸನಾಯಕರ ತೆಲುಗಿನಲ್ಲಿ 'ಮದ್ಲಿಂಗಡು' ಎಂಬ ಪದವನ್ನು ಸಂಬೋಧನೆ ಮಾಡುತ್ತಾರೆ. ವ್ಯವಹಾರಿಕ ಕನ್ನಡದ 'ಮದ್ಲಿಂಗ' ಪದವು ಬಳಕೆಯಾಗುವುದು ಕಂಡು ಬರುತ್ತದೆ.<br>ಉದಾ:<br>ಮ್ಯಾ.ತೆ. : ಮಹಾಬಲೇಶಡು ರೇಪು ಮದ್ಲಿಂಗಡು ಅವ್‌ತಡೆ<br>ಕನ್ನಡ : ಮಹಾಬಲೇಶ ನಾಳೆ ಮದ್ಲಿಂಗನಾಗುತ್ತಾನೆ |

೪. ಸಂಖ್ಯಾವಾಚಕಗಳಿಗೆ ಸಂಬಂಧಿಸಿದ ಪದಗಳ ಮೇಲೆ ತೆಲುಗಿನ ಪ್ರಭಾವ

| ಶಿಷ್ಟಕನ್ನಡ | | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು | ಪ್ರಯೋಗಗಳು ಮತ್ತು ವಿವರಣೆ |
|---|---|---|---|---|
| ೧. | ನೂರು | ನೂರು | ವಂದಾ | ಶಿಷ್ಟಕನ್ನಡದ 'ನೂರು' ಎಂಬ ಸಂಖ್ಯಾವಾಚಕ ಮ್ಯಾಸನಾಯಕರ ತೆಲುಗಿನಲ್ಲಿ ಬಳಕೆಯಾಗುತ್ತದೆ. ಶಿಷ್ಟತೆಲುಗಿನಲ್ಲಿ 'ವಂದಾ' ಎಂದು ಬಳಕೆಯಾಗುತ್ತದೆ.<br>ಉದಾ :<br>ಮ್ಯಾ.ತೆ.: ಸಾವಕಾಡು ದೇವರಾಜನಿಕಿ ನೂರು ರೂಪಾಯಿಲು ಇಚ್ಚಡೆ<br>ಕನ್ನಡ: ಸಾವುಕಾರ ದೇವರಾಜನಿಗೆ ನೂರು ರೂಪಾಯಿ ಕೊಟ್ಟಿದ್ದಾನೆ. |
| ೨. | ಸಾವಿರ | ಸಾವಿರ | ವೇಯಿ | ಶಿಷ್ಟತೆಲುಗಿನ 'ವೇಯಿ' ಪದದ ಬದಲಾಗಿ ಮ್ಯಾಸನಾಯಕರ ತೆಲುಗಿನಲ್ಲಿ 'ಸಾವಿರ' ಎಂದು ಸಂಬೋಧಿಸುತ್ತಾರೆ. ಶಿಷ್ಟಕನ್ನಡದ 'ಸಾವಿರ' ಎನ್ನುವ ಪದವೇ ಬಳಕೆಯಾಗುವುದು ಕಂಡುಬರುತ್ತದೆ.<br>ಉದಾ :<br>ಮ್ಯಾ.ತೆ. : ನಾಕಿ ನೆಲಕಿ ಸಾವಿರ ರೂಪಾಯಿಲು ಖರ್ಚು ವಸ್ತುದೆ.<br>ಕನ್ನಡ : ನನಗೆ ತಿಂಗಳಿಗೆ ಸಾವಿರ ರೂಪಾಯಿಗಳ ಖರ್ಚು ಬರುತ್ತದೆ. |

ಮ್ಯಾಸನಾಯಕರು ವ್ಯವಹಾರಕ್ಕಾಗಿ ಹೆಚ್ಚಾಗಿ ಕನ್ನಡ ಪರಿಸರದಲ್ಲಿ ಸಂಚರಿಸುವುದರಿಂದ ಇವರ ಮಾತೃಭಾಷೆಯ ಮೇಲೆ ಕನ್ನಡದ ಸಂಖ್ಯಾವಾಚಕಗಳ ಪ್ರಭಾವ ಕಂಡುಬರುತ್ತದೆ.

೫. ಆಹಾರ ಮತ್ತು ದವಸಧಾನ್ಯಕ್ಕೆ ಸಂಬಂಧಿಸಿದ ಪದಗಳ ಮೇಲೆ ಕನ್ನಡದ ಪ್ರಭಾವ

| ಶಿಷ್ಟಕನ್ನಡ | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು | ಪ್ರಯೋಗಗಳು ಮತ್ತು ವಿವರಣೆ |
|---|---|---|---|
| ೧. ಅನ್ನ | ಬುವ್ವ/ಅಂಬಲಿ | ಅನ್ನಮು | ಶಿಷ್ಟತೆಲುಗಿನ 'ಅನ್ನಮು' ಪದದ ಬದಲಾಗಿ ಮ್ಯಾಸನಾಯಕರ ತೆಲುಗಿನಲ್ಲಿ ಬುವ್ವ - ಅಂಬಲಿ ಪದಗಳು ಬಳಕೆಯಾಗುತ್ತವೆ. ಈ ಪದಗಳು ಮೂಲತಃ ಕನ್ನಡ ಪದಗಳು ವಿಶೇಷವಾಗಿ ಇವರಲ್ಲಿ ಬಳಕೆಯಾಗುತ್ತವೆ.<br>ಉದಾ :<br>ಮ್ಯಾ.ತೆ. : ಮಾ ತಾತಗಾರ ಇಂಟಿನಾನ ಬರೆ ಅಂಬಲಿ ಸೇಸ್ತಾರೆ.<br>ಕನ್ನಡ : ನಮ್ಮ ತಾತನವರ ಮನೆಯಲ್ಲಿ ಬರೆ ಅನ್ನ ಮಾಡುತ್ತಾರೆ. |
| ೨. ಅವರೆಕಾಳು | ಅವರೆಕಾಳು | ಅನಪಗಿಂಜಲು | ಶಿಷ್ಟತೆಲುಗಿನಲ್ಲಿ 'ಅನಪಗಿಂಜಲು' ಎಂಬ ಪದದ ಬದಲು ಮ್ಯಾಸನಾಯಕರ ತೆಲುಗುನಲ್ಲಿ 'ಅವರೆಕಾಳು' ಎಂಬ ಪದ ಪ್ರಯೋಗವಾಗುತ್ತದೆ. ಈ ಪದವು ಕನ್ನಡದ ಪದವಾಗಿದೆ.<br>ಉದಾ :<br>ಮ್ಯಾ.ತೆ. : ಮಾ ಕಡಿಕಿ ಅವರೆಕಾಳು ಬರ್ತಿ ಬೆಳಸ್ತರೆ.<br>ಕನ್ನಡ : ನಮ್ಮ ಕಡಿಗೆ ಅವರೆಕಾಳು ಬಹಳ ಬೆಳೆಯುತ್ತಾರೆ. |
| ೩. ಒಗ್ಗರಣೆ | ವಗ್ಗಾಣಿ | ತಿರುವಾತ | ಶಿಷ್ಟಕನ್ನಡದ 'ಒಗ್ಗರಣೆ' ಎನ್ನುವ ಪದವು ಮ್ಯಾಸನಾಯಕರ ತೆಲುಗಿನಲ್ಲಿ 'ವಗ್ಗಾಣಿ' ಎಂಬ ಪದ ಬಳಕೆಯಲ್ಲಿದೆ. ಶಿಷ್ಟತೆಲುಗಿನಲ್ಲಿ 'ತಿರುವಾತ' ಎಂಬ ಪದ ಪ್ರಯೋಗದಲ್ಲಿದೆ. |

| | | | | |
|---|---|---|---|---|
| | | | | ಇಲ್ಲಿ ಶಿಷ್ಟಕನ್ನಡದ ಪದಾದಿಯ 'ಒ' ಕಾರ ಲೋಪಗೊಂಡು 'ವ' ಕಾರ ಆದೇಶವಾಗಿ ಬಂದಿರುವದು ವಿಶಿಷ್ಟವಾಗಿದೆ. ಉದಾ : ಮ್ಯಾ.ತೆ.: ಬ್ಯಾಡಲು ಹಾಸಕಿ ವಗ್ಗಣ ಇಡಿ ಕನ್ನಡ : ಬೇಳೆ ಸಾರಿಗೆ ಒಗ್ಗರಣೆ ಬಿಡಿ |
| ೪. | ಕಡಲೆ | ಕಡ್ಲಿ | ಪಪ್ಪಲು | ಶಿಷ್ಟತೆಲುಗಿನ 'ಪಪ್ಪಲು' ಎನ್ನುವ ಪದವು ಮ್ಯಾಸನಾಯಕರ ತೆಲುಗಿನಲ್ಲಿ 'ಕಡ್ಲಿ' ಎಂದು ಬಳಕೆಯಲ್ಲಿದೆ. ಉದಾ : ಮ್ಯಾ.ತೆ.: ಅಂಗಡಿನಾನ ಮೂಡ ಕೆ.ಜಿ.ಲು ಕಡ್ಲು ತೀಸ್ಕೇನಿ ದಾ. ಕನ್ನಡ: ಅಂಗಡಿಯಲ್ಲಿ ಮೂರು ಕೆ.ಜಿ. ಕಡಲೆಯನ್ನು ತೆಗೆದುಕೊಂಡು ಬಾ. |
| ೫. | ಪಾಯಸ | ಉಗ್ಗಿ | ಪಾಯಸಮು | ಕನ್ನಡಿಗರ ಆಡುನುಡಿಯ 'ಉಗ್ಗಿ' ಎನ್ನುವ ಪದ ಮ್ಯಾಸನಾಯಕರ ತೆಲುಗಿನಲ್ಲಿ ಬಳಕೆಯಾಗುತ್ತದೆ. ಶಿಷ್ಟತೆಲುಗಿನಲ್ಲಿ 'ಪಾಯಸಮು' ಎಂದು ಬಳಕೆಯಾಗುತ್ತದೆ. ಉದಾ : ಮ್ಯಾ.ತೆ. : ರವಿ ಪೆಂಡ್ಲಿನನ ಉಗ್ಗಿ ಬಲು ಮಂಚಿಗೆ ವುಂಡೆ ಕನ್ನಡ : ರವಿ ಮದುವೆಯಲ್ಲಿ ಪಾಯಸ ಬಹಳ ಚೆನ್ನಾಗಿತ್ತು. |
| ೬. | ಶೇಂಗಾ | ನೆನಗಡಲೆ | ಚನ್ನಿಕಾಯಿ | ಮ್ಯಾಸನಾಯಕರ ತೆಲುಗಿನಲ್ಲಿ ನೆನಗಡಲೆ ಎಂಬ ಪದ ಪ್ರಯೋಗದಲ್ಲಿದೆ. ಇದು ಕನ್ನಡದ ಆಡುನುಡಿಯಲ್ಲಿ ಬಳಕೆಯಲ್ಲಿದೆ. |

ಶಿಷ್ಟತೆಲುಗಿನಲ್ಲಿ 'ಚೆನ್ನಿಕಾಯಿ' ಎಂದು ಕರೆಯುತ್ತಾರೆ.

ಉದಾ :

ಮ್ಯಾ.ತೆ. : ಚೆಳ್ಳಕೆರಿಕಿ ನೆನಗಡಲ್ ಏಸ್ಕೇನಿ ಪೊಯ್ಯಂಟಿ

ಕನ್ನಡ : ಚಳ್ಳಕೆರೆಗೆ ಶೇಂಗಾ ಹಾಕಿಕೊಂಡು ಹೋಗಿದ್ದೆ.

**೬. ಗುಣವಾಚಕಗಳಿಗೆ ಸಂಬಂಧಿಸಿದ ಪದಗಳ ಮೇಲೆ ಕನ್ನಡದ ಪ್ರಭಾವ**

| ಶಿಷ್ಟಕನ್ನಡ | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು | ಪ್ರಯೋಗಗಳು ಮತ್ತು ವಿವರಣೆ |
|---|---|---|---|
| ೧. ಅಗಲ | ಅಗಲಮು | ವೆಡಲ್ಪು | ಶಿಷ್ಟತೆಲುಗಿನ 'ವೆಡಲ್ಪು' ಎನ್ನುವ ಪದವು ಮ್ಯಾಸನಾಯಕರ ತೆಲುಗಿನಲ್ಲಿ 'ಅಗಲಮು' ಎಂದು ಬಳಕೆಯಾಗುತ್ತದೆ. ಶಿಷ್ಟಕನ್ನಡದ 'ಅಗಲ' ಪದಕ್ಕೆ ತೆಲುಗಿನ 'ಮು' ಕಾರ ಸೇರಿಕೊಂಡು 'ಅಗಲಮು' ಎಂದು ಪ್ರಯೋಗವಾಗುತ್ತದೆ.<br>ಉದಾ :<br>ಮ್ಯಾ.ತೆ. : ಬಸವರಾಜನಗಾರ ಇಂಟಿ ಪಕ್ಕನನಾ ಜಾಗ ಸ್ಥಾನ ಅಗಲಮು ವುಂಡದೆ.<br>ಕನ್ನಡ : ಬಸವರಾಜನ ಮನೆ ಪಕ್ಕದಲ್ಲಿ ಜಾಗವು ಬಹಳ ಅಗಲವಿದೆ. |
| ೨. ಕಡಿಮೆ | ಕಡ್ಮಿ | ತಕ್ಕುವ | ಶಿಷ್ಟತೆಲುಗಿನ 'ತಕ್ಕುವ' ಪದದ ಬದಲು ಮ್ಯಾಸನಾಯಕರ ತೆಲುಗಿನಲ್ಲಿ 'ಕಡ್ಮಿ' ಎಂಬ ಪದ ಬಳಕೆಯಲ್ಲಿದೆ. ಕನ್ನಡದ 'ಕಡಿಮೆ' ಎಂಬ ಪದ ಬಳಕೆಯಾಗುವುದನ್ನು ನೋಡಬಹುದಾಗಿದೆ. |

| | | | | |
|---|---|---|---|---|
| | | | | ಉದಾ :<br>ಮ್ಯಾ.ತೆ. : ನಾತನ ರೊಕ್ಕಮು ಕಡ್ಮಿ ಉಂಡುದೆ<br>ಕನ್ನಡ : ನನ್ನ ಹತ್ತಿರ ರೊಕ್ಕ ಕಡಿಮೆಯಿದೆ. |
| ೩. | ಕುಳ್ಳ | ಗಿಡ್ಡ | ಪೊಟ್ಟಿ | ಶಿಷ್ಟತೆಲುಗಿನ 'ಪೊಟ್ಟಿ' ಎನ್ನುವ ಪದವು ಮ್ಯಾಸನಾಯಕರ ತೆಲುಗಿನಲ್ಲಿ 'ಗಿಡ್ಡ' ಎಂದು ಪ್ರಯೋಗವಾಗುತ್ತದೆ. ಕನ್ನಡದ ಆಡುನುಡಿಯಲ್ಲಿ ಬಳಕೆಯಾಗುವ 'ಗಿಡ್ಡ' ಪದದ ಪ್ರಭಾವ ಬೀರಿರಬಹುದು.<br>ಉದಾ :<br>ಮ್ಯಾ.ತೆ. : ಪಾಲಯ್ಯ ಗಿಡ್ಡಕ ವುಂಡಡೆ.<br>ಕನ್ನಡ : ಪಾಲಯ್ಯನು ಬಹಳ ಕುಳ್ಳಗಿದ್ದಾನೆ. |
| ೪. | ಬಾಳ | ಬಾಳಮು | ಎಕ್ಕುವ | ಶಿಷ್ಟತೆಲುಗಿನಲ್ಲಿ 'ಎಕ್ಕುವ' ಎಂಬ ಪದಕ್ಕೆ ಮ್ಯಾಸನಾಯಕರ ತೆಲುಗಿನಲ್ಲಿ 'ಬಾಳಮು' ಎಂದು ಬಳಕೆಯಲ್ಲಿದೆ. ಕನ್ನಡದ 'ಬಾಳ' ಎಂಬ ಪದಕ್ಕೆ ತೆಲುಗಿನ 'ಮು' ಕಾರ ಸೇರಿಕೊಂಡು 'ಬಾಳಮು' ಎಂದು ಪ್ರಯೋಗವಾಗುತ್ತದೆ.<br>ಉದಾ :<br>ಮ್ಯಾ.ತೆ. : ಮ್ಯಾಸಲದೊಡ್ಡಿನಾನ ಬಾಳಮು ಗಲಾಟಿ ಅಯ್‌ದೆ<br>ಕನ್ನಡ : ಮ್ಯಾಸರ ಹಟ್ಟಿಯಲ್ಲಿ ಬಹಳ ಗಲಾಟೆ ಆಗಿದೆ. |
| ೫. | ಭಾರ | ಬಾರಮು | ಬರವು | ಶಿಷ್ಟತೆಲುಗಿನ 'ಬರವು' ಎಂಬ ಪದದ ಬದಲಾಗಿ ಮ್ಯಾಸನಾಯಕರ ತೆಲುಗಿನಲ್ಲಿ 'ಬಾರಮು' ಎಂದು ಪ್ರಯೋಗವಾಗುತ್ತಿದೆ. ಕನ್ನಡದ 'ಭಾರ' ಪದಕ್ಕೆ ತೆಲುಗಿನ 'ಮು' ಕಾರ |

| | | | |
|---|---|---|---|
| | | | ಸೇರಿಕೊಂಡು 'ಭಾರಮು' ಎಂದು ಸಂಬೋಧಿಸುತ್ತಾರೆ.<br>ಉದಾ :<br>ಮ್ಯಾ.ತೆ.: ಜೋಂಡ್ಲು ತಿತ್ತಿ ಸ್ಯಾನ ಬಾರಮು ವುಂಡದೆ<br>ಕನ್ನಡ: ಜೋಳದ ಚೀಲ ಬಹಳ ಭಾರವಿದೆ |
| ೬. ರೊವಷ್ಟು | ರೊವಂತ | ಕೊಂಚಮು | ಶಿಷ್ಟತೆಲುಗಿನ 'ಕೊಂಚವು' ಎನ್ನುವ ಪದವನ್ನು ಮ್ಯಾಸನಾಯಕರ ತೆಲುಗಿನಲ್ಲಿ 'ರೊವಂತ' ಎಂದು ಬಳಕೆಯಾಗುತ್ತದೆ. ಶಿಷ್ಟ ಕನ್ನಡದಲ್ಲಿ 'ರೊವಷ್ಟು' ಎಂದು ಬಳಕೆಯಾಗುವುದನ್ನು ಕಾಣಬಹುದು.<br>ಉದಾ :<br>ಮ್ಯಾ.ತೆ.: ಪಾತ್ರಿನನ ರೊವಂತ ಬುವ್ವ ವುಂಡುದೆ ದನಕೋಸ್ಕರಮ್ಮೆ ಆನಂದಡು ಮುದ್ದತಾಗ ಲೇದು<br>ಕನ್ನಡ: ಪಾತ್ರೆಯಲ್ಲಿ ಸ್ವಲ್ಪ ಅನ್ನವಿತ್ತು ಅದಕ್ಕೋಸ್ಕರವಾಗಿ ಆನಂದನು ಊಟಮಾಡಲಿಲ್ಲ |

೭. ಕ್ರಿಯಾಪದಗಳಿಗೆ ಸಂಬಂಧಿಸಿದ ಪದಗಳು

| ಶಿಷ್ಟಕನ್ನಡ | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು | ಪ್ರಯೋಗಗಳು ಮತ್ತು ವಿವರಣೆ |
|---|---|---|---|
| ೧. ಉಗಳು | ಉಗ್ಗು | ಉಮಿ | 'ಉಗಳು' ಎನ್ನುವ ಶಿಷ್ಟಕನ್ನಡ ಪದವು ಮ್ಯಾಸನಾಯಕರ ತೆಲುಗಿನಲ್ಲಿ ಬಳಕೆಯಾಗುತ್ತದೆ. ಶಿಷ್ಟತೆಲುಗಿನ 'ಉಮಿ' ಎನ್ನುವುದಕ್ಕೆ ಪರ್ಯಾಯವಾಗಿ ಬಳಕೆಯಾಗುತ್ತದೆ.<br>ಉದಾ : |

| | | | | |
|---|---|---|---|---|
| | | | | ಮ್ಯಾ.ತೆ.: ರವೀಂದ್ರನ ನೊಟ್ಲಾಕಿ ಉಗ್ಳುಮಲೇ<br>ಕನ್ನಡ: ರವೀಂದ್ರನ ಬಾಯಗಾ ಉಗಳುಲೇ! |
| ೨. | ಓಡು | ಓಡು | ಪಾರು | ಶಿಷ್ಟತೆಲುಗಿನ 'ಪಾರು' ಎನ್ನುವ ಪದದ ಬದಲು ಮ್ಯಾಸನಾಯಕರ ತೆಲುಗಿನಲ್ಲಿ 'ಓಡು' ಎನ್ನುವ ಪದ ಬಳಕೆಯಲ್ಲಿದೆ. ಕನ್ನಡದ 'ಓಡು' ಪದದ ಪ್ರಭಾವ ಬೀರಿರಬಹುದು.<br>ಉದಾ :<br>ಮ್ಯಾ.ತೆ.: ವಿಜಯಡು ಬಾರಿ ಓಡುತಾಡೆ<br>ಕನ್ನಡ: ವಿಜಯನು ಬಾರಿ ಓಡುವನು |
| ೩. | ಓದು | ಒತ್ತಾಡು | ಚದವು | ಶಿಷ್ಟತೆಲುಗಿನ 'ಚದವು' ಎಂಬ ಪದವನ್ನು ಮ್ಯಾಸನಾಯಕರ ತೆಲುಗಿಲ್ಲಿ 'ಒತ್ತಾಡು' ಎಂದು ಬಳಕೆಯಾಗುತ್ತದೆ. ಕನ್ನಡದ 'ಓದು' ಪದದ ಪ್ರಭಾವ ಬೀರಿರಬಹುದು.<br>ಉದಾ :<br>ಮ್ಯಾ.ತೆ.: ದಿನಾಲು ಮಾ ಅಯ್ಯ ಪೇಪರ್ ಒತ್ತಾಡೆ<br>ಕನ್ನಡ: ದಿನಾಲು ನಮ್ಮ ಅಪ್ಪ ಪೇಪರ್ ಓದುತ್ತಾನೆ |
| ೪. | ತಡೆ | ತಡಿ | ಆಗು | ಶಿಷ್ಟತೆಲುಗಿನ 'ಆಗು' ಎನ್ನುವ ಕ್ರಿಯಾಪದವು ಮ್ಯಾಸನಾಯಕರ ತೆಲುಗಿನಲ್ಲಿ 'ತಡಿ' ಎಂಬ ಪದವು ಬಳಕೆಯಲ್ಲಿದೆ. ಶಿಷ್ಟಕನ್ನಡದ ಪದಾಂತ್ಯದಲ್ಲಿ 'ಎ' ಕಾರ ಲೋಪಗೊಂಡು 'ಇ' ಕಾರ ಆದೇಶವಾಗಿ ಬರುತ್ತದೆ. ಇದು ಇಲ್ಲಿನ ವೈಶಿಷ್ಟ್ಯವಾಗಿದೆ.<br>ಉದಾ : |

| | | | | |
|---|---|---|---|---|
| | | | | ಮ್ಯಾ.ತೆ.: ರಘು ನಾನು ಊರಿಕಿ ವತ್ತನು ತಡಿ<br>ಕನ್ನಡ: ರಘು ನಾನು ಊರಿಗೆ ಬರುತ್ತೇನೆ ತಡೆ |
| ೫. | ಬರೆ | ಬರೆ | ರಾಯಿ | ಶಿಷ್ಟತೆಲುಗಿನಲ್ಲಿ 'ರಾಯಿ' ಎನ್ನುವ ಪದ ಮ್ಯಾಸನಾಯಕರಲ್ಲಿ 'ಬರೆ' ಎನ್ನುವ ಪದ ಬಳಕೆಯಲ್ಲಿದೆ. ಶಿಷ್ಟಕನ್ನಡದ 'ಬರೆ' ಎಂಬ ಪದದ ಪ್ರಭಾವ ಬೀರಿರುವುದನ್ನು ಕಾಣಬಹುದು.<br>ಉದಾ :<br>ಮ್ಯಾ.ತೆ.: ನಾ ಅಲ್ಲುಡು ಪರೀಕ್ಷೆಮು ಬರೆಸಿಕೆ ಪೊಯಡೆ<br>ಕನ್ನಡ: ನನ್ನ ಅಳಿಯ ಪರೀಕ್ಷೆ ಬರೆಯುವದಕ್ಕೆ ಹೋಗಿದ್ದಾನೆ. |
| ೬. | ಮುಳಗು | ಮುಳ್ಗು | ಮುನಗು | ಶಿಷ್ಟಕನ್ನಡದ 'ಮುಳಗು' ಪದವು ಮ್ಯಾಸನಾಯಕರ ತೆಲುಗಿನಲ್ಲಿ ಮುಳ್ಗು ಪದ ಬಳಕೆಯಲ್ಲಿದೆ. ಶಿಷ್ಟತೆಲುಗಿನಲ್ಲಿ 'ಮುನಗು' ಎಂದು ಪ್ರಯೋಗವಾಗುತ್ತದೆ.<br>ಉದಾ :<br>ಮ್ಯಾ.ತೆ.: ಬೀಮುಡು ನಿಡ್ಲಾನ ಜಾಸ್ತಿ ಮುಳುಗ್ತಾಡೆ.<br>ಕನ್ನಡ: ಭೀಮನು ನೀರಿನಲ್ಲಿ ಬಹಳ ಮುಳುಗುತ್ತಾನೆ. |

ಮೊಳಕಾಲ್ಮೂರು ಪ್ರದೇಶದಲ್ಲಿ ನೆಲೆಸಿರುವ ಮ್ಯಾಸನಾಯಕರು ದ್ವಿಭಾಷಿಕರಾಗಿರುವದರಿಂದ ಒಂದು ಭಾಷೆಯ ಮೇಲೆ ಮತ್ತೊಂದು ಭಾಷೆಯು ಪ್ರಭಾವ ಬೀರಿರುವುದು ಸಾಮಾನ್ಯವಾದ ಲಕ್ಷಣ. ಇವರ ಕೌಟುಂಬಿಕ ವಲಯದ ತೆಲುಗು ಭಾಷೆಯ ಮೇಲೆ ಕನ್ನಡದ ಪ್ರಭಾವ ಬೀರಿರುವುದು ಮೇಲಿನ ಎಲ್ಲಾ ವಲಯಗಳಿಂದ ತಿಳಿದುಬರುತ್ತದೆ.

## ೮. ಮ್ಯಾಸನಾಯಕರ ಕೌಟುಂಬಿಕ ವಲಯದ ಭಾಷೆಯಲ್ಲಿ ಬಳಕೆಯಾಗುವ ವಿಶಿಷ್ಟಪದಗಳು

ಮ್ಯಾಸನಾಯಕರ ಭಾಷೆಯಲ್ಲಿ ಬಳಕೆಯಾಗುವ ಈ ವಿಶಿಷ್ಟ ಪದಗಳು ಶಿಷ್ಟತೆಲುಗು ಮತ್ತು ಶಿಷ್ಟಕನ್ನಡಕ್ಕಿಂತ ಭಿನ್ನವಾಗಿವೆ.

| | ಕನ್ನಡ | ವಿಶಿಷ್ಟ ಪದಗಳು | ತೆಲುಗು | ಪ್ರಯೋಗಗಳು ಮತ್ತು ವಿವರಣೆ |
|---|---|---|---|---|
| ೧. | ಕಟ್ಟಿಗೆ | ಪುಡುಕುಲು | ಕಟ್ಟಲು/ಕರ್ರಲು | ಮ್ಯಾಸನಾಯಕರು ತಮ್ಮ ಕೌಟುಂಬಿಕ ವಲಯದ ಭಾಷೆಯಲ್ಲಿ 'ಕಟ್ಟಿಗೆ' ಎಂಬ ಪದಕ್ಕೆ 'ಪುಡುಕುಲು' ಎಂದು ಸಂಬೋಧಿಸುತ್ತಾರೆ. ಪುಡುಕುಲು ಎಂದರೆ ಇವರ ಭಾಷೆಯಲ್ಲಿ 'ಕಟ್ಟಿಗೆ' ಎಂದರ್ಥ. ಕನ್ನಡದ 'ಕಟ್ಟಿಗೆ ಪುಳ್ಳೆ' ಪದದ ಪ್ರಭಾವದಿಂದ ಬಳಕೆಯಾಗುತ್ತಿರಬಹುದು. ಆದರೆ ಈ ಪದ ವಿಶಿಷ್ಟವಾಗಿ ಬಳಕೆಯಾಗುತ್ತದೆ.<br>ಉದಾ :<br>ಮ್ಯಾ.ತೆ. : ಉರ್ತಾಳಾನ ಪುಡಕಲು ಸ್ಯಾನ ನೊರಕುತಾರ<br>ಕನ್ನಡ : ಉರ್ತಾಳನಲ್ಲಿ ಕಟ್ಟಿಗೆ ಬಹಳ ಕಡಿಯುತ್ತಾರೆ. |
| ೨. | ಚೀಲ | ತಿತ್ತಿ | ಸಂಚಿ | 'ತಿತ್ತಿ' ಎನ್ನುವ ಮ್ಯಾಸನಾಯಕರ ಪದ ಕನ್ನಡದಲ್ಲಿ 'ಚೀಲ' ಎಂದು ಬಳಕೆಯಾಗಿ ತೆಲುಗಿನಲ್ಲಿ 'ಸಂಚಿ' ಎಂದು ಪ್ರಯೋಗವಾಗುತ್ತದೆ. ಮ್ಯಾಸನಾಯಕರ ಭಾಷೆಯಲ್ಲಿ 'ತಿತ್ತಿ' ಎಂದು ವಿಶಿಷ್ಟವಾಗಿ ಬಳಕೆಗೊಳ್ಳುವುದು ಗಮನಿಸುವಂತಹ ಅಂಶವಾಗಿದೆ.<br>ಉದಾ :<br>ಮ್ಯಾ.ತೆ.: ಈತಡವು ಮಾಮು ೧೫೦ ತಿತ್ತಿಲು ಜೋಂಡ್ಲು ಬೆಳೆಸೆಮಿ |

| | | | | |
|---|---|---|---|---|
| | | | | ಕನ್ನಡ: ಈ ಸಲ ನಾವು ೧೫೦ ಚೀಲ ಜೋಳ ವನ್ನು ಬೆಳೆಸಿದ್ದೇವೆ. |
| ೩. | ದೊಡ್ಡಪ್ಪ | ಗೊಪ್ಪಯ್ಯ | ಪೆದ್ದನಾಯನಾ | 'ಗೊಪ್ಪಯ್ಯ' ಎಂಬ ಪದವನ್ನು ಸಂಬಂಧ ಸೂಚಕವಾಗಿ ಕನ್ನಡದ 'ದೊಡ್ಡಪ್ಪ' ಪದದ ಬದಲಾಗಿ ಮ್ಯಾಸನಾಯಕರ ಭಾಷೆಯಲ್ಲಿ ಬಳಕೆಯಾಗುತ್ತದೆ. 'ಗೊಪ್ಪ' ಎಂದರೆ ತೆಲುಗಿನಲ್ಲಿ 'ಉತ್ತಮ' ಎನ್ನುವ ಅರ್ಥವನ್ನು ಹೊಂದಿದೆ. ಆದರೆ ಮ್ಯಾಸನಾಯಕರು ಬಂಧು ಸೂಚಕ ಪದವಾಗಿ 'ಗೊಪ್ಪಯ್ಯ' ಎಂದು ಸಂಬೋಧಿಸುತ್ತಾರೆ.<br><br>ಉದಾ :<br><br>ಮ್ಯಾ.ತೆ.: ಮಾ **ಗೊಪ್ಪಯ್ಯ** ನಾಮಿಂದ ಪಂಚ ಪ್ರಾಣಮು<br><br>ಕನ್ನಡ: ನಮ್ಮ ದೊಡ್ಡಪ್ಪ ನನ್ನ ಮೇಲೆ ಪಂಚ ಪ್ರಾಣ |
| ೪. | ಬೆಳಿಗ್ಗೆ | ರೈಕಾಡ / ರೆಕಾಡ | ಪ್ರದ್ದುನ | ಮ್ಯಾಸನಾಯಕರು ಬೆಳಿಗ್ಗೆ ಎನ್ನುವ ಪದಕ್ಕೆ 'ರೆಕಾಡ' ಎಂದು ಸಂಬೋಧಿಸುತ್ತಾರ. ತೆಲುಗಿ ನಲ್ಲಿ 'ಪ್ರದ್ದುನ' ಎಂಬ ಪದ ಬಳಕೆಯಲ್ಲಿದೆ. 'ರೆಕಾಡ' ಎನ್ನುವ ವಿಶಿಷ್ಟಪದ ಈ ಸಮು ದಾಯದಲ್ಲಿ ಬಳಕೆಯಾಗುತ್ತದೆ.<br><br>ಉದಾ:<br><br>ಮ್ಯಾ.ತೆ.: ನಾನು **ರೆಕಾಡ** ಲೇಸಿ ದುರ್ಗಮುಕಿ ಪೂವ್ವಾಲ<br><br>ಕನ್ನಡ: ನಾನು ಬೆಳಿಗ್ಗೆ ಎದ್ದು ದುರ್ಗಕ್ಕೆ ಹೋಗಬೇಕು. |

| | | | | |
|---|---|---|---|---|
| ೫. | ಮುಗಳಿ | ಪುಟ್ಟಿ | ಗುದ್ದ | ಮ್ಯಾಸನಾಯಕರ ಕೌಟುಂಬಿಕ ವಲಯದ ಭಾಷೆಯಲ್ಲಿ 'ಪುಟ್ಟಿ' ಎಂಬ ಪದ ಬಳಕೆಯಲ್ಲಿದೆ. 'ಪುಟ್ಟಿ' ಎಂದರೆ ಇವರ ಭಾಷೆಯಲ್ಲಿ 'ಮುಗಳಿ' ಎಂದರ್ಥ. ತೆಲುಗಿನಲ್ಲಿ 'ಗುದ್ದ' ಎಂದರ್ಥ. ಈ ಪದವು ವಿಶಿಷ್ಟವಾಗಿ ಬಳಕೆಯಾಗುತ್ತದೆ.<br>ಉದಾ :<br>ಮ್ಯಾ.ತೆ.: ರಾಮನಿಕಿ ಪುಟ್ಟಿಮಿಂದ ಗಾಯಮು ಆಯಿಂದಿ<br>ಕನ್ನಡ: ರಾಮನಿಗೆ ಮುಗಳಿಮೇಲೆ ಗಾಯವಾಗಿದೆ. |
| ೬. | ಮೊಲೆ | ಸೊನ್ನು | ರೊಮ್ಮು | ಮ್ಯಾಸನಾಯಕರ ಕೌಟುಂಬಿಕ ವಲಯದ ಭಾಷೆಯಲ್ಲಿ 'ಸೊನ್ನು' ಎನ್ನುವ ಪದ ಬಳಕೆಯಲ್ಲಿದೆ. ಸೊನ್ನು ಎಂದರೆ 'ಮೊಲೆ' ಎಂದು ಅರ್ಥ. ತೆಲುಗಿನಲ್ಲಿ ಈ ಪದ 'ರೊಮ್ಮು' ಎಂದು ಬಳಕೆಗೊಳ್ಳುತ್ತಿದೆ.<br>ಉದಾ:<br>ಮ್ಯಾ.ತೆ.: ಮಾ ಅಮ್ಮ ಪಾಪಿಕಿ ಸೊನ್ನು ಇಚ್ಚೆಕಿ ಪೊಯ್ಯಿದಾ<br>ಕನ್ನಡ: ನಮ್ಮ ಅಮ್ಮ ತಂಗಿಗೆ ಮೊಲೆ ಕುಡಿಸುವುದಕ್ಕೆ ಹೋಗಿದ್ದಾಳೆ. |
| ೭. | ಸಗಣಿ | ತಪ್ಪ | ಪ್ಯಾಡ | ಈ ಪ್ರದೇಶದಲ್ಲಿ ಮ್ಯಾಸನಾಯಕರು ಮಾತ್ರ 'ತಪ್ಪ' ಎಂಬ ಪದವನ್ನು ಬಳಸುತ್ತಾರೆ. 'ತಪ್ಪ' ಎಂದರೆ 'ಸಗಣಿ' ಎನ್ನುವ ಅರ್ಥದಲ್ಲಿ ಪ್ರಯೋಗ ಮಾಡುತ್ತಾರೆ. ತೊಪ್ಪ ಎನ್ನುವ ರೂಪ ಕೂಡ ಕನ್ನಡದ್ದೆ. ಶಿಷ್ಟತೆಲುಗಿನಲ್ಲಿ ಪ್ಯಾಡ ಎಂದು ಕರೆಯುತ್ತಾರೆ. |

| | | | | |
|---|---|---|---|---|
| | | | | ಉದಾ :<br>ಮ್ಯಾ.ತೆ.: ಪ್ರತಿ ಶನಿವಾರಮು ಇಂಟಾಮುಂದಾ ತಪ್ಪ ನೀಡ್ಲು ಏಸಿ ಸಾರಸ್ತರ<br>ಕನ್ನಡ: ಪ್ರತಿ ಶನಿವಾರ ಮನೆಮುಂದೆ ಸಗಣಿ ನೀರು ಹಾಕುತ್ತಾರೆ. |
| ೮. | ಸಾರು | ಅಗಲಿಕಾ / ಹಾಸ | ಸಾರು | ‘ಅಗಲಿಕಾ’ ಎನ್ನುವ ಪದವು ಮ್ಯಾಸನಾಯಕರಲ್ಲಿ ಕನ್ನಡದ ‘ಸಾರು’ ಎನ್ನುವ ಅರ್ಥದಲ್ಲಿ ಬಳಕೆಯಾಗುತ್ತದೆ. ಈ ಪದವು ಎರಡು ಭಾಷೆಗಳಿಗಿಂತ ಭಿನ್ನವಾಗಿ ಬಳಕೆಯಾಗುತ್ತದೆ. ಕೆಲವೊಂದು ಹಳ್ಳಿಗಳಲ್ಲಿ ‘ಹಾಸ’ ಎಂದು ಕರೆಯುತ್ತಾರೆ.<br>ಉದಾ :<br>ಮ್ಯಾ.ತೆ.: ಬ್ಯಾಡಲು ಅಗಲಿಕಾ ಬಾಗುವುಂಡದೆ ಇಪದ್ದು<br>ಕನ್ನಡ: ಬೇಳೆ ಸಾರು ಚೆನ್ನಾಗಿತ್ತು ಇವತ್ತು |
| ೯. | ಹೆಂಡತಿ | ಆಲು | ಬಾರ್ಯ | ಇವರಲ್ಲಿ ಹೆಂಡತಿಗೆ ‘ಆಲು’ ಎಂಬ ಬಂಧು ಸೂಚಕವನ್ನು ಬಳಸುತ್ತಾರೆ. ಈ ಪದವು ಕನ್ನಡ ಮತ್ತು ತೆಲುಗು ಭಾಷೆಗಳಿಗಿಂತ ಭಿನ್ನವಾಗಿ ಬಳಕೆಯಾಗುತ್ತದೆ. ಈ ಪದವು ತೆಲುಗಿನ ಆಡು ನುಡಿಯಾಗಿರಬಹುದು.<br>ಉದಾ :<br>ಮ್ಯಾ.ತೆ. : ನೀ ಯಾಲು ಬಲೇ ಬಾಗವುಂಡದಿ<br>ಕನ್ನಡ : ನಿನ್ನ ಹೆಂಡತಿ ಬಹಳ ಚೆನ್ನಾಗಿದ್ದಾಳೆ |
| ೧೦. | ಹೊಟ್ಟೆ | ವಡ್ಲು | ಕಡಪು | ‘ವಡ್ಲು’ ಎಂಬ ಪದವು ಮ್ಯಾಸನಾಯಕರ ಭಾಷೆಯಲ್ಲಿ ‘ಹೊಟ್ಟೆ’ ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. ತೆಲುಗಿನಲ್ಲಿ ‘ಕಡಪು’ |

ಎನ್ನುವ ಅರ್ಥದಲ್ಲಿ ಪ್ರಯೋಗವಾಗುತ್ತದೆ. ಕನ್ನಡದಲ್ಲಿ 'ಒಡಲು' ಎಂದರೆ ದೇಹ ಎನ್ನುವ ಅರ್ಥವಿದೆ. ಈ ರೂಪದಿಂದ ಮ್ಯಾಸನಾಯಕರ ಭಾಷೆಯಲ್ಲಿ ಬಳಕೆಯಾಗುತ್ತಿರಬಹುದು.

ಉದಾ :

ಮ್ಯಾ.ತೆ.: ರೆಕಾಡಿನಿಂಟಿ ಬದುಕು ಸೇಸಿ ವಡ್ಲಾಕ್ಲಾ ಆಯಿಂದಿ

ಕನ್ನಡ: ಬೆಳಿಗ್ಗೆಯಿಂದ ಕೆಲಸಮಾಡಿ ಹೊಟ್ಟೆ ಹಸಿವು ಆಗಿದೆ.

೧೧. ಹೊರಗೆ ಎಲ್ಲಿಕಾ ಬೈಟಾ

'ಎಲ್ಲಿಕಾ' ಎನ್ನುವ ಪದ ಎರಡು ಭಾಷೆಗಳಿಗಿಂತ ಭಿನ್ನವಾಗಿ ಮ್ಯಾಸನಾಯಕರಲ್ಲಿ ಮಾತ್ರ ಬಳಕೆಯಾಗುತ್ತದೆ. 'ಹೊರಗೆ' ಎನ್ನುವದಕ್ಕೆ 'ಎಲ್ಲಿಕಾ' ಎಂದು ಉಚ್ಚಾರಣೆ ಮಾಡುತ್ತಾರೆ.

ಉದಾ :

ಮ್ಯಾ.ತೆ.: ಮಾ ಅನ್ನಾ ವೂಡು ಎಲ್ಲಿಕಾ ಪೂಯಡೇ

ಕನ್ನಡ: ನಮ್ಮ ಅಣ್ಣ ಇವಾಗ ಹೊರಗೆ ಹೋಗಿದ್ದಾನೆ.

ಕೆಲವು ವಿಶಿಷ್ಟವಾಗಿ ಬಳಕೆಯಾಗುತ್ತಿರುವ ಪದಗಳು

| ಕನ್ನಡ | ವಿಶಿಷ್ಟಪದಗಳು | ತೆಲುಗು |
|---|---|---|
| ಕಲ್ಲು | ರಾಡ್ಲು | ರಾಳು |
| ಜೋಳ | ಜೋಂಡ್ಲು | ಜೊನ್ನಲು |
| ಹಲ್ಲು | ಪಂಡ್ಲು | ಪಳ್ಳು |

ಈ ಪದಗಳು ಕನ್ನಡ ಮತ್ತು ತೆಲುಗುಗಿಂತ ಭಿನ್ನವಾಗಿ ಬಳಕೆಯಾಗುತ್ತವೆ. ಈ ವಿಶಿಷ್ಟಪದಗಳು ಹೆಚ್ಚಿನ ಅಧ್ಯಯನಕ್ಕೆ ಕುತೂಹಲವನ್ನು ಮೂಡಿಸುತ್ತವೆ.

## ೩. ಮ್ಯಾಸನಾಯಕರ ವ್ಯವಹಾರಿಕ ಕನ್ನಡ ಭಾಷೆಯ ಮೇಲೆ ತೆಲುಗಿನ ಪ್ರಭಾವ

ಈ ಸಮುದಾಯದವರು ದ್ವಿಭಾಷಿಕರಾಗಿರುವುದರಿಂದ ಕನ್ನಡ ಮತ್ತು ತೆಲುಗು ಭಾಷೆಯನ್ನು ಬಲ್ಲವರಾಗಿದ್ದಾರೆ. ಇವರ ವ್ಯವಹಾರಿಕ ಕನ್ನಡ ಭಾಷೆಯ ಮೇಲೆ ತೆಲುಗು ಭಾಷೆಯ ಪ್ರಭಾವ ಇರುವುದು ಸಹಜವಾಗಿದೆ. ನಿತ್ಯೋಪಯೋಗಿ ಮತ್ತು ಗೃಹೋಪಯೋಗಿಗೆ ಸಂಬಂಧಿಸಿದ ಪದಗಳು. ಸೊಪ್ಪು ತರಕಾರಿ ಮತ್ತು ಪ್ರಾಣಿಸೂಚಕ ಪದಗಳು. ಕ್ರಿಯಾಪದ ಮತ್ತು ಸಾಮಾನ್ಯ ವಾಚಕಗಳಿಗೆ ಸಂಬಂಧಿಸಿದ ಪದಗಳ ಮೇಲೆ ತೆಲುಗಿನ ಪ್ರಭಾವ ವಿವರಿಸಲಾಗುವುದು. ಮ್ಯಾಸನಾಯಕರು ಮನೆಗಳ ಆವರಣದಲ್ಲಿ ಮಾತೃಭಾಷೆಯಾದ ತೆಲುಗನ್ನು ಮಾತನಾಡಿ ವ್ಯವಹಾರಿಕ ವಲಯಗಳಲ್ಲಿ ಕನ್ನಡ ಮಾತನಾಡುವಾಗ ಅನಿವಾರ್ಯವಾಗಿ ಪ್ರಭಾವ ಬೀರುತ್ತದೆ. ಇಂತಹ ಪ್ರಕ್ರಿಯೆ ನಡೆಯುವುದು, ಹಳೆ ತಲೆಮಾರಿನವರಲ್ಲಿ ಮತ್ತು ಅನಕ್ಷರಸ್ಥರಾದ ಕೃಷಿ, ಕಾರ್ಮಿಕರು, ಮಹಿಳೆಯರಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ವಿವರಣೆಗಾಗಿ ಕೆಲವೊಂದು ಪದಗಳನ್ನು ಮಾತ್ರ ವಿಶ್ಲೇಷಿಸಲಾಗಿದೆ.

### ೧. ನಿತ್ಯೋಪಯೋಗಿ ಮತ್ತು ಗೃಹೋಪಯೋಗಿ ವಸ್ತು ಸೂಚಿ ಪದಗಳಲ್ಲಿ ತೆಲುಗಿನ ಪ್ರಭಾವ

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಪ್ರಯೋಗಗಳು ಮತ್ತು ವಿವರಣೆ |
|---|---|---|
| ೧. ಕುಡುಗೋಲು | ಕೊಡವಿಲಿ | ಮ್ಯಾಸನಾಯಕರ ವ್ಯವಹಾರಿಕ ಕನ್ನಡದಲ್ಲಿ ತೆಲುಗಿನ 'ಕೊಡವಿಲಿ' ಎಂಬ ಪದ ಬಳಕೆಯಲ್ಲಿದೆ. ಇಲ್ಲಿ ಶಿಷ್ಟಕನ್ನಡದ ಪದಾದಿಯ 'ಉ' ಕಾರವು ಮ್ಯಾಸನಾಯಕರ ಕನ್ನಡದಲ್ಲಿ 'ಒ' ಕಾರವಾಗಿ ಬಳಕೆಯಾಗುತ್ತಿದೆ. ಮತ್ತು 'ಗ' ಕಾರದ ಬದಲು 'ವ' ಕಾರವು ಆದೇಶವಾಗಿ ಬಂದು, ಬಳಕೆಯಾಗುವುದು ಇಲ್ಲಿಯ ವೈಶಿಷ್ಟ್ಯವಾಗಿದೆ.<br>ಉದಾ : ಗದ್ಯಕೊಯ್ಯಾಕ ವೋಗಬೇಕು ಒಂದು ಕೊಡವಿಲಿ ಕೊಡ್ರಿ. |
| ೨. ಚಾಪೆ | ಸ್ಯಾಪ | ಮ್ಯಾಸನಾಯಕರ ವ್ಯವಹಾರಿಕ ಕನ್ನಡದಲ್ಲಿ 'ಚಾಪೆ'ಯ ಬದಲು ಸ್ಯಾಪ ಎಂಬ ಪದವು ಬಳಕೆಗೊಳ್ಳುತ್ತದೆ. ಮ್ಯಾಸನಾಯಕರ ವ್ಯವಹಾರಿಕ ತೆಲುಗಿನಲ್ಲೂ 'ಸ್ಯಾಪ' ಎನ್ನುವ ಪದ ಬಳಕೆಯಲ್ಲಿರುವುದರಿಂದ ಇಲ್ಲಿಯ ಕನ್ನಡದ ಮೇಲೆ ತೆಲುಗಿನ ಪ್ರಭಾವ ಬೀರಿದೆ. ಇಲ್ಲಿ ಗಮನಿಸಬೇಕಾದ |

| | | |
|---|---|---|
| | | ಅಂಶವೇನೆಂದರೆ 'ಚ' ಕಾರದ ಬದಲು 'ಸ' ಕಾರ ಆದೇಶವಾಗಿ ಬಂದಿರುವುದು. |
| | | ಉದಾ : **ಸ್ಯಾಪ** ಮೇಲೆ ಕುಂತಕಳ್ರಿ |
| ೩. ಚಾವಟಿ | ಸೆಲ್‌ಕೋಲ್ | 'ಚಾವಟಿ' ಎನ್ನುವ ಪದವನ್ನು ಮ್ಯಾಸನಾಯಕರ ಕನ್ನಡದಲ್ಲಿ 'ಸೆಲ್‌ಕೋಲು' ಎಂದು ಬಳಸುತ್ತಿದ್ದಾರೆ. ತೆಲುಗಿನ ಸೆಲ್ ಕೋಲು ಇವರ ಕನ್ನಡದಲ್ಲಿ ಪ್ರಯೋಗವಾಗಿರುವುದು ಕಂಡು ಬರುತ್ತದೆ. ಇಲ್ಲಿಯೂ ಪದಾದಿಯಲ್ಲಿ 'ಚ' ಕಾರವು ಲೋಪವಾಗಿ 'ಸ' ಕಾರವು ಆದೇಶವಾಗಿ ಬಂದು ಇಲ್ಲಿ ಬಳಕೆಗೊಳ್ಳುತ್ತದೆ. ಈ ಪ್ರದೇಶದ ಪಶ್ಚಿಮ ಮತ್ತು ದಕ್ಷಿಣಕ್ಕೆ 'ಬಾರಕೋಲು' ಎಂದೂ ಪೂರ್ವ ಮತ್ತು ಉತ್ತರಕ್ಕೆ ಸೆಲ್‌ಕೋಲ್ ಎಂದೂ ಬಳಕೆಯಲ್ಲಿದೆ. |
| | | ಉದಾ : ದನಗಳ ವಡಿಯಾಕ **ಸೆಲ್‌ಕೋಲ್** ತಗಂಡ್ ಬಾ |
| ೪. ನೊಗ | ಕಾಡಮಾನ/ನೊಗನ | ಕೃಷಿಗೆ ಸಂಬಂಧಿಸಿದ ನೊಗ ಎಂಬ ಪದವು ಮ್ಯಾಸನಾಯಕರ ಕನ್ನಡದಲ್ಲಿ 'ಕಾಡಮಾನ' ಎಂದು ಬಳಕೆಗೊಳ್ಳುತ್ತದೆ. ಈ ಪದವನ್ನು ತೆಲುಗಿನಲ್ಲೂ 'ಕಾಡಮಾನ' ಎಂದು ಕರೆಯುವುದು ಕಂಡುಬರುತ್ತದೆ. ಮೊಳಕಾಲ್ಮೂರು ಪ್ರದೇಶದ ದಕ್ಷಿಣ ಮತ್ತು ಪಶ್ಚಿಮ ದಿಕ್ಕಿನಲ್ಲಿ 'ನೊಗನ' ಎಂದು ಬಳಕೆ ಮಾಡುತ್ತಾರೆ. ಆದರೆ ಉತ್ತರ ಮತ್ತು ಪೂರ್ವಕ್ಕೆ ಕಾಡಮಾನ ಎಂದು ಕರೆಯುತ್ತಾರೆ. |
| | | ಉದಾ : ವಲದಲ್ಲಿ ಮಡಿಕೆ ಕಟ್ಟಾಕ ಕಾಡಮಾನ ತಗಂಡ ಬಾ |
| ೫. ಬತ್ತಿ (ದೀಪದಬತ್ತಿ) | ವತ್ತಿ | 'ಬತ್ತಿ' ಪದವು ಮ್ಯಾಸನಾಯಕರ ಕನ್ನಡದಲ್ಲಿ 'ವತ್ತಿ' ಎಂದು ಬಳಕೆಯಾಗುತ್ತಿದೆ. ಪೂರ್ವದ ಹಳಗನ್ನಡದಲ್ಲಿ 'ವ' ಕಾರ ಹಳೆಗನ್ನಡದಲ್ಲಿ 'ಬ' ಕಾರವಾಗಿದೆ. ಆದರೆ ಇದಕ್ಕೆ ವಿರುದ್ಧವಾದ ಧ್ವನಿ ನಿಯಮದಲ್ಲಿ ಬಳಕೆಯಲ್ಲಿರುವುದು ಸ್ಪಷ್ಟ. ಅಂದರೆ ಪ್ರಮಾಣದ ಕನ್ನಡದ 'ಬ' ಕಾರ ಮ್ಯಾಸನಾಯಕರ ಕನ್ನಡದಲ್ಲಿ 'ವ' ಕಾರವಾಗಿರುವುದು ಗಮನಿಸುವಂತಹ ಅಂಶವಾಗಿದೆ. |
| | | ಉದಾ : ಅಂಗ್ಡಿಗೆ ವೋಗಿ ದೀಪದ **ವತ್ತಿ** ತಗಂಡ ಬಾ |

| | | |
|---|---|---|
| ೬. ಬಲೆ | ವಲ | ಮ್ಯಾಸನಾಯಕರ ವ್ಯವಹಾರಿಕದಲ್ಲಿ 'ಬಲೆ' ಎನ್ನುವ ಪದವನ್ನು 'ವಲ' ಎಂದು ಉಚ್ಛಾರಣೆ ಮಾಡುತ್ತಿದ್ದಾರೆ. ಪೂರ್ವದ ಹಳೆಗನ್ನಡದಲ್ಲಿ 'ವ' ಕಾರ ಹಳೆಗನ್ನಡದಲ್ಲಿ 'ಬ' ಕಾರ ಆಗಿದೆ. ಆದರೆ ಇದಕ್ಕೆ ವಿರುದ್ಧವಾದ ಧ್ವನಿ ನಿಯಮದಲ್ಲಿ ಬಳಕೆಯಲ್ಲಿ ರುವುದು ಸ್ಪಷ್ಟ. ಅಂದರೆ ಪ್ರಮಾಣ ಕನ್ನಡದ 'ಬ' ಕಾರವು ಮ್ಯಾಸನಾಯಕರ ಕನ್ನಡದಲ್ಲಿ 'ವ' ಕಾರವಾಗಿರುವುದು ಗಮನಿಸುವಂತಹ ಅಂಶವಾಗಿದೆ.<br>ಉದಾ : ಬ್ಯಾಟೆ ಆಡಾಕ ವೋಗಬೇಕು ವಲ ತಗಂಬಾ |
| ೭. ಹಾಸಿಗೆ | ಪೊರಪ/ಪಾರಪ | ಹಾಸಿಗೆ ಎನ್ನುವ ಪದವನ್ನು ಮ್ಯಾಸನಾಯಕರ ಕನ್ನಡದಲ್ಲಿ 'ಪೊರಪ' ಎಂದು ಬಳಕೆ ಮಾಡುತ್ತಿದ್ದಾರೆ.<br>ಉದಾ : ಕಟ್ಟೆಮ್ಯಾಲೆ ಪೊರಪೆ ಆಸ್ರಿ |

೨. ಸೊಪ್ಪು ತರಕಾರಿಗಳಿಗೆ ಸಂಬಂಧಿಸಿದ ಪದಗಳ ಮೇಲೆ ತೆಲುಗಿನ ಪ್ರಭಾವ

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಪ್ರಯೋಗಗಳು ಮತ್ತು ವಿವರಣೆ |
|---|---|---|
| ೧. ಆಲುಗಡ್ಡೆ | ಉರ್ಲುಗಡ್ಡೆ | ಮ್ಯಾಸನಾಯಕರ ಕನ್ನಡದಲ್ಲಿ 'ಉರ್ಲುಗಡ್ಡೆ' ಪದವು ಬಳಕೆಗೊಳ್ಳುತ್ತಿದೆ. ಆದರೆ ಶಿಷ್ಟಕನ್ನಡದಲ್ಲಿ 'ಆಲುಗಡ್ಡೆ' ಎಂದು ಬಳಕೆಗೊಳ್ಳುತ್ತಿದೆ. ಇಲ್ಲಿ 'ಉರ್ಲು' ಎನ್ನುವ ತೆಲುಗಿನ ಪದಕ್ಕೆ 'ಗಡ್ಡೆ' ಎಂಬ ಕನ್ನಡ ರೂಪ ಸೇರಿಕೊಂಡು 'ಉರ್ಲು ಗಡ್ಡೆ' ಎಂದು ಬಳಕೆಗೊಳ್ಳುತ್ತಿದೆ. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಮ್ಯಾಸನಾಯಕರಲ್ಲಿ ನುಡಿಬೆರಕೆ ಪ್ರಕ್ರಿಯೆ ಕಂಡುಬಂದಿರುವುದು ವೈಶಿಷ್ಟ್ಯವಾಗಿದೆ.<br>ಉದಾ : ಉರ್ಲುಗಡ್ಡ ಆಕಿ ಪಲ್ಲೇ ಮಾಡಿ |
| ೨. ಕುಂಬಳಕಾಯಿ | ಗುಮ್ಮಡಕಾಯಿ | ಮ್ಯಾಸನಾಯಕರ ಕನ್ನಡದಲ್ಲಿ 'ಗುಮ್ಮಡಕಾಯಿ' ಎಂದು ಬಳಕೆಗೊಳ್ಳುತ್ತಿದೆ. ಶಿಷ್ಟಕನ್ನಡದಲ್ಲಿ 'ಕುಂಬಳಕಾಯಿ' ಎಂದು ಬಳಕೆಯಾಗುತ್ತದೆ. ತೆಲುಗಿನ 'ಗುಮ್ಮಡ' ಎಂಬ ಪದಕ್ಕೆ 'ಕಾಯಿ' ಎಂಬ ಕನ್ನಡ ರೂಪ ಸೇರಿಕೊಂಡು, 'ಗುಮ್ಮಡ ಕಾಯಿ' ಎಂದು ಬಳಕೆಯಾಗುತ್ತದೆ. ಇಲ್ಲಿ ನುಡಿಬೆರಕೆ ಪ್ರಕ್ರಿಯೆ |

| | | |
|---|---|---|
| | | ಕಂಡುಬಂದಿರುವುದು ಮ್ಯಾಸನಾಯಕರ ಕನ್ನಡದಲ್ಲಿ ವೈಶಿಷ್ಟ್ಯವಾಗಿದೆ.<br>ಉದಾ : ನಮ್ಮ ವಲದಾಗ ಗುಮ್ಮಡಕಾಯಿ ಸ್ಯಾನ ಬೇಸ್ಯೆದಾವ |
| ೩. ತೆಂಗಿನಕಾಯಿ | ಟೆಂಕಾಯಿ | ಮ್ಯಾಸನಾಯಕರ ಕನ್ನಡದಲ್ಲಿ 'ಟೆಂಕಾಯಿ' ಎಂದು ಬಳಕೆಗೊಳ್ಳುವ ಪದವು ಶಿಷ್ಟಕನ್ನಡದಲ್ಲಿ ತೆಂಗಿನಕಾಯಿ ಎಂದು ಬಳಕೆಗೊಳ್ಳುತ್ತದೆ. ಇಲ್ಲಿ 'ಟೆಂ' ಎಂಬ ತೆಲುಗಿನ ರೂಪಕ್ಕೆ 'ಕಾಯಿ' ಎನ್ನುವ ಕನ್ನಡದ ರೂಪ ಸೇರಿಕೊಂಡು 'ಟೆಂಕಾಯಿ' ಎಂದು ಬಳಕೆಗೊಳ್ಳುತ್ತದೆ. ಇಲ್ಲಿ ನುಡಿಬೆರಕೆ ಪ್ರಕ್ರಿಯೆ ಕಂಡುಬಂದಿರುವುದು ಮ್ಯಾಸನಾಯಕರ ಕನ್ನಡದ ವೈಶಿಷ್ಟ್ಯತೆ.<br>ಉದಾ : ಪೂಜೆಗೆ ಟೆಂಕಾಯಿ ವೊಯ್ಕಿರಿ |
| ೪. ಹಿರೇಕಾಯಿ | ಬೀರಕಾಯಿ | ಶಿಷ್ಟಕನ್ನಡದಲ್ಲಿ 'ಹೀರೆಕಾಯಿ' ಎನ್ನುವ ಪದವನ್ನು ಮ್ಯಾಸನಾಯಕರ ಕನ್ನಡದಲ್ಲಿ 'ಬೀರಕಾಯಿ' ಎಂದು ಬಳಕೆ ಮಾಡುತ್ತಿದ್ದಾರೆ. ಇಲ್ಲಿ 'ಬೀರ' ಎಂಬ ತೆಲುಗಿನ ರೂಪಕ್ಕೆ 'ಕಾಯಿ' ಎನ್ನುವ ಕನ್ನಡದ ರೂಪ ಸೇರಿಕೊಂಡು 'ಬೀರಕಾಯಿ' ಎಂದು ಬಳಕೆಯಾಗುತ್ತಿದೆ. ಇಲ್ಲಿ ನುಡಿಬೆರಕೆ ಕ್ರಿಯೆ ಕಂಡುಬಂದಿದೆ.<br>ಉದಾ : ಬೀರಕಾಯಿ ಎಷ್ಟು ರೂಪಾಯಿಗೆ ಕೆ.ಜಿ? |
| ೫. ಹುಣಸೆಮರ | ಚಿಂತಮರ | ಶಿಷ್ಟಕನ್ನಡದಲ್ಲಿ 'ಹುಣಸೆಮರ' ಎನ್ನುವ ಪದವನ್ನು ಮ್ಯಾಸನಾಯಕರ ಕನ್ನಡದಲ್ಲಿ 'ಚಿಂತಮರ' ಎಂದು ಬಳಕೆಗೊಳ್ಳುತ್ತಿದೆ. 'ಚಿಂತ' ಎಂಬ ತೆಲುಗಿನ ಪದಕ್ಕೆ 'ಮರ' ಎಂಬ ಕನ್ನಡ ರೂಪ ಸೇರಿಕೊಂಡು 'ಚಿಂತಮರ' ಎಂದು ಬಳಕೆಗೊಳ್ಳುತ್ತಿದೆ. ನುಡಿಬೆರಕೆಯ ಪ್ರಕ್ರಿಯೆ ಕಂಡುಬಂದಿರುವುದು ಇಲ್ಲಿಯ ವೈಶಿಷ್ಟ್ಯವಾಗಿದೆ.<br>ಉದಾ : ರಂಗಪ್ಪ ವಲದಾಗ ಚಿಂತಮರಗಳನ್ನು ಸ್ಯಾನ ಬೆಳೆಸ್ಯಾನ |

ಸೊಪ್ಪು ತರಕಾರಿಗಳಿಗೆ ಸಂಬಂಧಿಸಿದ ಪದಗಳನ್ನು ಮೊಳಕಾಲ್ಮೂರು ಪ್ರದೇಶಗಳಲ್ಲಿ ಸಂತೆ ನಡೆಯುವ ಪ್ರಮುಖ ಸ್ಥಳಗಳಾದ ರಾಂಪುರ, ನಾಗಸಮುದ್ರ, ಮೊಳಕಾಲ್ಮೂರು ಮುಂತಾದ ಸ್ಥಳಗಳಲ್ಲಿ ಸಂಗ್ರಹಿಸಲಾಗಿದೆ.

ವ್ಯಾಪಾರಿಗಳು ದ್ವಿಭಾಷಿಕರಾಗಿರುವುದರಿಂದ ಮ್ಯಾಸನಾಯಕರು ತೆಲುಗಿನಲ್ಲಿ ಮಾತನಾಡಿದರೂ ಅವರು ಪ್ರತಿಕ್ರಿಯೆ ನೀಡುತ್ತಾರೆ.

**೩. ಪ್ರಾಣಿ ಸೂಚಕಗಳಿಗೆ ಸಂಬಂಧಿಸಿದ ಕನ್ನಡ ಪದಗಳ ಮೇಲೆ ತೆಲುಗಿನ ಪ್ರಭಾವ**

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಪ್ರಯೋಗಗಳು ಮತ್ತು ವಿವರಣೆ |
|---|---|---|
| ೧. ಅಳಿಲು | ಉರ್ತಿ | ಶಿಷ್ಟಕನ್ನಡದಲ್ಲಿ 'ಅಳಿಲು' ಎಂದು ಬಳಕೆಯಾಗುವ ಪದ ಮ್ಯಾಸನಾಯಕರ ಕನ್ನಡದಲ್ಲಿ 'ಉರ್ತಿ' ಎಂದು ಬಳಕೆಯಾಗುತ್ತಿದೆ. ಇದು ತೆಲುಗಿನ ಪ್ರಭಾವದಿಂದ ಬಳಕೆಯಾಗುತ್ತಿದೆ.<br>ಉದಾ : ಮರದ ಮ್ಯಾಲೆ ಉರ್ತಿ ಐದಾವ |
| ೨. ಗುಬ್ಬಿ | ಗುವ್ವ | ಶಿಷ್ಟಕನ್ನಡದ 'ಗುಬ್ಬಿ' ಎನ್ನುವ ಪದವನ್ನು ಮ್ಯಾಸನಾಯಕರ ಕನ್ನಡದಲ್ಲಿ 'ಗುವ್ವ' ಎಂದು ಬಳಕೆ ಮಾಡುತ್ತಿದ್ದಾರೆ. ತೆಲುಗಿನಲ್ಲೂ ಗುಬ್ಬಿಯನ್ನು ಗುವ್ವ ಎಂದು ಕರೆಯುವುದರಿಂದ ಗುವ್ವ ಪದ ಸಂಗೋಪನೆಯಾದಂತೆ ಕಾಣುತ್ತದೆ. ಉದಾ :<br>ಗುವ್ವಲು ತಿಂದ್ ತಿಂದ್ ಬೆಳೆಯಲ್ಲಾ ಆಳ್‌ಮಾಡಿದ್ವು |
| ೩. ಟಗರು | ಪಟ್ಲಿ | ಶಿಷ್ಟಕನ್ನಡದಲ್ಲಿ 'ಟಗರು' ಎಂಬ ಪದವನ್ನು ಮ್ಯಾಸನಾಯಕರ ಕನ್ನಡದಲ್ಲಿ 'ಪಟ್ಲಿ' ಎಂದು ಕರೆಯುತ್ತಾರೆ. ತೆಲುಗಿನಲ್ಲಿ 'ಪೊಟ್ಲಿ' ಎಂದು ಕರೆಯುತ್ತಾರೆ. ಆದ್ದರಿಂದ ಮ್ಯಾಸನಾಯಕರ ಕನ್ನಡದಲ್ಲಿ 'ಪಟ್ಲಿ' ಎನ್ನುವ ಪದವು ಬಳಕೆಯಲ್ಲಿ ಉಳಿದುಕೊಂಡು ಬಂದಿದೆ.<br>ಉದಾ : ನಾಳೆ ಪಟ್ಲಿ ಕೊಯ್ ತೀವಿ |
| ೪. ನರಿ | ನಕ್ಕ | ಶಿಷ್ಟಕನ್ನಡದಲ್ಲಿ 'ನರಿ' ಎಂಬ ಪದ ಮ್ಯಾಸನಾಯಕರ ಕನ್ನಡದಲ್ಲಿ ನಕ್ಕ ಎಂದು ಬಳಕೆಗೊಳ್ಳುತ್ತದೆ. ತೆಲುಗಿನಲ್ಲಿ 'ನಕ್ಕ' ಎಂದು ಕರೆಯುತ್ತಾರೆ. ಮ್ಯಾಸನಾಯಕರ ಕನ್ನಡದಲ್ಲಿ 'ನಕ್ಕ' ಎನ್ನುವ ಪದವು ಬಳಕೆಯಲ್ಲಿ ಉಳಿದುಕೊಂಡು ಬಂದಿದೆ.<br>ಉದಾ : ರಾತ್ರಿ ಟೈಮ್‌ನ್ಯಾಗ ನಕ್ಕಲು ಬೊಗಳ್ತಾವ. |

| | | |
|---|---|---|
| ೫. ಮೊಲ | ಕುಂದ್ಲಿ | ಶಿಷ್ಟಕನ್ನಡದಲ್ಲಿ 'ಮೊಲ' ಎನ್ನುವ ಪದವನ್ನು ಮ್ಯಾಸನಾಯಕರ ಕನ್ನಡದಲ್ಲಿ 'ಕುಂದ್ಲಿ' ಎಂದು ಬಳಕೆ ಮಾಡುತ್ತಿದ್ದಾರೆ. 'ಕುಂದ್ಲಿ' ಎನ್ನುವ ಪದವು ತೆಲುಗಿನಲ್ಲಿದೆ.<br>ಉದಾ : ಬ್ಯಾಟಿಗೆ ವೋಗಿ ಎಲ್ಡು ಕುಂದ್ಲಿ ಇಟಗಂಡು ಬಂದಾರ |
| ೬.ಹಲ್ಲಿ | ಬಲ್ಲಿ | ಶಿಷ್ಟಕನ್ನಡದಲ್ಲಿ 'ಹಲ್ಲಿ' ಎನ್ನುವ ಪದವನ್ನು ಮ್ಯಾಸನಾಯಕರ ಕನ್ನಡದಲ್ಲಿ 'ಬಲ್ಲಿ' ಎಂದು ಬಳಕೆಮಾಡುತ್ತಿದ್ದಾರೆ. ತೆಲುಗಿನಲ್ಲಿ ಹಲ್ಲಿಯನ್ನು 'ಬಲ್ಲಿ' ಎಂದು ಕರೆಯುತ್ತಾರೆ.<br>ಉದಾ : ಗ್ವಾಡೆ ಮ್ಯಾಲೆ ಬಲ್ಲಿ ಐತೆ |

ಈ ಸಮುದಾಯದವರು ಪ್ರಾಣಿಸೂಚಕ ಸಂಬಂಧಿಸಿದ ಪದಗಳಲ್ಲಿ ಸಹ ತೆಲುಗು ಭಾಷೆಯ ಪದಗಳನ್ನು ಉಳಿಸಿಕೊಂಡು ಬಂದಿದ್ದಾರೆ. ಇವರು ಹೆಚ್ಚಾಗಿ ಬೇಟೆಯ ಸಂಸ್ಕೃತಿಗೆ ಸಂಬಂಧಿಸಿದ ಪ್ರಾಣಿಸೂಚಕ ಪದಗಳನ್ನು ಮಾತೃಭಾಷೆಯಲ್ಲಿ ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ.

**೪. ಕ್ರಿಯಾ ಪದಗಳಿಗೆ ಸಂಬಂಧಿಸಿದ ಕನ್ನಡದ ವಾಕ್ಯಗಳಲ್ಲಿ ತೆಲುಗು ಪದಗಳ ಬಳಕೆ**

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಪ್ರಯೋಗಗಳು ಮತ್ತು ವಿವರಣೆ |
|---|---|---|
| ೧. ಇಳಿ | ದಿಗು | ಶಿಷ್ಟಕನ್ನಡದಲ್ಲಿ 'ಇಳಿ' ಎನ್ನುವ ಪದವು ಮ್ಯಾಸನಾಯಕರ ಕನ್ನಡದಲ್ಲಿ 'ದಿಗು' ಎಂದು ಬಳಕೆಯಾಗುತ್ತಿದೆ. ತೆಲುಗಿನಲ್ಲೂ 'ದಿಗು' ಎನ್ನುವ ಪದ ಮ್ಯಾಸನಾಯಕರ ಕನ್ನಡದಲ್ಲಿ ಉಳಿದು ಕೊಂಡಿದೆ.<br>ಉದಾ : ಬಸ್ಸು ದಿಗು ಬಾ |
| ೨. ಊದು | ಊಬು | ಶಿಷ್ಟಕನ್ನಡದಲ್ಲಿ 'ಊದು' ಎನ್ನುವ ಪದವು ಮ್ಯಾಸನಾಯಕರ ಕನ್ನಡದಲ್ಲಿ 'ಊಬು' ಎಂದು ಬಳಕೆಗೊಳ್ಳುತ್ತಿದೆ. ತೆಲುಗಿನಲ್ಲೂ 'ಊಬು' ಎನ್ನುವ ಪದ ಬಳಕೆ ಮ್ಯಾಸನಾಯಕರ ಕನ್ನಡದಲ್ಲಿ ಉಳಿದುಕೊಂಡಿದೆ.<br>ಉದಾ : ಬೆಂಕಿ ಅಚ್ಚಿ ವೊಲೆ ಊಬು |
| ೩. ಏರು | ಎಕ್ಕು | ಶಿಷ್ಟಕನ್ನಡದಲ್ಲಿ 'ಏರು' ಎನ್ನುವ ಪದವು ಮ್ಯಾಸನಾಯಕರ ಕನ್ನಡದಲ್ಲಿ 'ಎಕ್ಕು' ಎಂದು ಬಳಕೆಯಾಗುತ್ತಿದೆ. ತೆಲುಗಿನಲ್ಲೂ |

‘ಎಕ್ಕು’ ಎನ್ನುವ ಈ ಪದವು ಮ್ಯಾಸನಾಯಕರ ಕನ್ನಡದಲ್ಲಿ ಉಳಿದುಕೊಂಡಿದೆ.

ಉದಾ : ಸೈಕಲ್ ಮ್ಯಾಲೆ ಎಕ್ಕು

ಮ್ಯಾಸನಾಯಕರ ವ್ಯವಹಾರಿಕ ಕನ್ನಡದಲ್ಲಿ ಕೆಲವೊಂದು ತೆಲುಗಿನ ಕ್ರಿಯಾಪದಗಳನ್ನು ಉಳಿಸಿಕೊಂಡು ಬಂದಿರುವುದು ಕಾಣಬಹುದು. ಈ ಎರಡು ಭಾಷೆಗಳು ಮೂಲತ: ದ್ರಾವಿಡ ಭಾಷಾವರ್ಗಕ್ಕೆ ಸೇರಿರುವುದರಿಂದ ಕೆಲವೊಂದು ಕ್ರಿಯಾ ಪದಗಳಲ್ಲಿ ಸಾಮ್ಯತೆಯನ್ನು ಗುರುತಿಸಬಹುದು.

**೫. ಸಾಮಾನ್ಯ ವಾಚಕಗಳಿಗೆ ಸಂಬಂಧಿಸಿದ ಕನ್ನಡ ಪದಗಳ ಮೇಲೆ ತೆಲುಗಿನ ಪ್ರಭಾವ**

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಪ್ರಯೋಗಗಳು ಮತ್ತು ವಿವರಣೆ |
|---|---|---|
| ೧. ಬಾವಿ | ಬಾಯಿ | ಶಿಷ್ಟಕನ್ನಡದಲ್ಲಿ ‘ಬಾವಿ’ ಎನ್ನುವ ಪದವನ್ನು ಮ್ಯಾಸನಾಯಕರ ಕನ್ನಡದಲ್ಲಿ ‘ಬಾಯಿ’ ಎಂದು ಕರೆಯಲ್ಪಡುತ್ತಿದೆ. ಆದರೆ ಈ ಪದವು ತೆಲುಗಿನ ಪ್ರಭಾವದಿಂದ ಬಂದಿರಬಹುದು. ಏಕೆಂದರೆ ತೆಲುಗಿನಲ್ಲೂ ‘ಬಾಯಿ’ ಎನ್ನುವ ಪದ ಬಳಕೆಯಲ್ಲಿದೆ.<br>ಉದಾ: ಊರುಮುಂದೆ ಬಾಯಾಗ ನೀರಿಲ್ಲ |
| ೨. ಬ್ರಾಹ್ಮಣ | ಬಾಪ್ನಯ್ಯ | ಶಿಷ್ಟಕನ್ನಡದ ‘ಬ್ರಾಹ್ಮಣ’ ಎನ್ನುವ ಪದವನ್ನು ಮ್ಯಾಸನಾಯಕರ ಕನ್ನಡದಲ್ಲಿ ‘ಬಾಪ್ನಯ್ಯ’ ಎಂದು ಬಳಕೆ ಮಾಡುತ್ತಿದ್ದಾರೆ. ತೆಲುಗಿನಲ್ಲೂ ‘ಬಾಪ್ನಯ್ಯ’ ಎನ್ನುವ ಪದ ಬಳಕೆಯಲ್ಲಿರುವುದರಿಂದ ತೆಲುಗಿನ ಪದ ಹಾಗೇ ಉಳಿದುಕೊಂಡು ಬಂದಿದೆ.<br>ಉದಾ : ಬಾಪ್ನಯ್ಯ ಬೆಳಿಗ್ಗೆ ಕಂಡಿದ್ನ. |
| ೩. ಹೇಲು | ಪಿಯ್ಯ | ಶಿಷ್ಟಕನ್ನಡದ ‘ಹೇಲು’ ಎನ್ನುವ ಪದವು ಮ್ಯಾಸನಾಯಕರ ಕನ್ನಡದಲ್ಲಿ ‘ಪಿಯ್ಯ’ ಎಂದು ಬಳಕೆಯಾಗುತ್ತದೆ. ‘ಪಿಯ್ಯ’ ಎನ್ನುವುದು ತೆಲುಗಿನ ಪದವಾದ್ದರಿಂದ ತೆಲುಗಿನ ಪ್ರಭಾವದಿಂದ ಮ್ಯಾಸನಾಯಕರ ಕನ್ನಡದಲ್ಲಿ ‘ಪಿಯ್ಯ’ ಎನ್ನುವ ಪದವು ಉಳಿದುಕೊಂಡಿದೆ.<br>ಉದಾ : ನೀರ ತಗಂಡ ಬಾ ಪಿಯ್ಯ ತುಳಿದು ಬಂದೀನಿ |

| ೪. ಹೊಲ್ಮೇರಿ | ಪೋಲ್ಮೇರಿ | ಶಿಷ್ಟಕನ್ನಡದ ಹೊಲ್ಮೇರಿ (ಗಡಿರೇಖೆ) ಎನ್ನುವ ಪದವು ಮ್ಯಾಸ ನಾಯಕರ ಕನ್ನಡದಲ್ಲಿ 'ಪೋಲ್ಮೇರಿ' ಎಂದು ಬಳಕೆಗೊಳ್ಳುತ್ತಿದೆ. ತೆಲುಗಿನಲ್ಲೂ ಪೋಲ್ಮೇರಿ ಎಂದು ಬಳಕೆಗೊಳ್ಳುತ್ತಿದೆ. ಇಲ್ಲಿ ಕನ್ನಡದ 'ಹ' ಕಾರಕ್ಕೆ ಕನ್ನಡದ 'ಪ' ಕಾರ ಸೇರಿಕೊಂಡು ತೆಲುಗಿನ ಪದವಾಗಿದೆ.<br>ಉದಾ : ನಮ್ಮ ಊರು ಪೊಲ್ಮೇರಿಯಾಗ ವೆಂಕಟಾಪುರ ವೊಲಗಳು ಐಯದಾವ್ |
|---|---|---|

೬. ಮ್ಯಾಸನಾಯಕರ ವ್ಯವಹಾರಿಕ ಕನ್ನಡದಲ್ಲಿ ವಿಶಿಷ್ಟವಾಗಿ ಬಳಕೆಯಾಗುತ್ತಿರುವ ಪದಗಳು

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ |
|---|---|
| ಚಿಂತೆ | ಸಿಂತೆ |
| ಚಾಚು | ಸಾಪು |
| ಚೆಲ್ಲು | ಸೆಲ್ಲು |
| ಚಾಪೆ | ಸ್ಯಾಪ |
| ಚಲುಮಿ | ಸಲುಮಿ |
| ಚೀಲ | ಸೀಲ |
| ಚೀರು | ಸೀರು |
| ಚೆಂಡು | ಸೆಂಡು |
| ಚಳಿ | ಸಳಿ |
| ಚರ್ಮ | ಸರ್ಮ |
| ಚಕ್ಕೆ | ಸೆಕ್ಕೆ |

ಈ ಮೇಲಿನ ಪದಗಳಲ್ಲಿ ಶಿಷ್ಟಕನ್ನಡದ ಪದಾದಿಯ 'ಚ' ಕಾರ ಲೋಪಗೊಂಡು ಮ್ಯಾಸನಾಯಕರ ಕನ್ನಡದಲ್ಲಿ 'ಸ' ಕಾರ ಆದೇಶವಾಗಿ ಬರುವುದನ್ನು ಕಾಣಬಹುದು. ಆದರೆ ಮೊಳಕಾಲ್ಮೂರು ಪ್ರದೇಶದಲ್ಲಿ ಇತರ ಸಮುದಾಯದವರಲ್ಲಿ ಸಹ 'ಚ' ಕಾರವು 'ಸ' ಕಾರವಾಗಿ ಪರಿವರ್ತನೆಗೊಂಡಿರುವುದು ಗಮನಿಸಬಹುದು.

## ೪. ನುಡಿಬೆರಕೆ ಮತ್ತು ನುಡಿಪಲ್ಲಟ

ದ್ವಿಭಾಷಿಕ ಸನ್ನಿವೇಶಗಳಲ್ಲಿ ಭಾಷಿಕರ ವ್ಯವಹಾರದಲ್ಲಿ ಕಂಡುಬರುವ ಮುಖ್ಯ ಭಾಷಿಕ ಪ್ರಕ್ರಿಯಗಳಾಗಿ ನುಡಿಬೆರಕೆ ಮತ್ತು ನುಡಿಪಲ್ಲಟಗಳನ್ನು ಗುರುತಿಸಬಹುದು. ಇಂಗ್ಲಿಶ್‌ನ Code Mixing ಸಂವಾದಿಯಾಗಿ ನುಡಿಬೆರಕೆ ಮತ್ತು ನುಡಿಮಿಶ್ರಣ ಎಂದೂ Code switchingಗೆ ಸಂವಾದಿಯಾಗಿ ನುಡಿಜಗಿತ, ನುಡಿಪಲ್ಲಟ

ಎಂಬ ಪದಗಳನ್ನು ಕನ್ನಡದ ಸಂದರ್ಭದಲ್ಲಿ ಸಾಮಾಜಿಕ ಭಾಷಾಶಾಸ್ತ್ರದ ಬರಹಗಳಲ್ಲಿ ಬಳಸಲಾಗುತ್ತಿದೆ. "ಒಂದು ಭಾಷೆಯ ವಾಕ್ಯವನ್ನು ಆಡುವಾಗ / ಬರೆಯುವಾಗ ಇನ್ನೊಂದು ಭಾಷಾಂಶಗಳು ಬೆರೆಸುವುದು ನುಡಿಬೆರಕೆ. ಇಡೀ ವಾಕ್ಯದ ಹಿಂದಿನ ನಿಯಮ ಒಂದು ಭಾಷೆಯದಾಗಿದ್ದು, ವಾಕ್ಯಾಂಶಗಳು ಮಾತ್ರ ಕೆಲವು ಇನ್ನೊಂದು ಭಾಷೆಯಿಂದ ಬಂದು ಸೇರಿರುತ್ತವೆ. ನುಡಿಜಿಗಿತದಲ್ಲಿ ಒಂದು ವಾಕ್ಯವನ್ನು ಒಂದು ಭಾಷೆಯ ನಿಯಮಾನುಸಾರ ರಚಿಸಿ, ಆನಂತರ ಹೊಸ ವಾಕ್ಯವನ್ನು ಇಡಿಯಾಗಿ ಇನ್ನೊಂದು ಭಾಷೆಯಲ್ಲಿ ರಚಿಸಿ ಬಳಸಲಾಗುತ್ತದೆ. ವಾಕ್ಯದ ಆಚೆಗಿನ ಹಂತದಲ್ಲಿ ಈ ಬೆರಕೆ ನಡೆಯುತ್ತದೆ. ದ್ವಿಭಾಷಿಕರಲ್ಲಿ ನಡೆಯುವ ನುಡಿಬೆರಕೆಯ ಪ್ರಮಾಣ ಉದ್ದೇಶಗಳು ಭಿನ್ನವಾಗಿರುತ್ತವೆ. ನುಡಿಜಿಗಿತ ಮಾತ್ರ ಬಹುಮಟ್ಟಿಗೆ ದ್ವಿಭಾಷಿಕರಲ್ಲೂ ನಡೆಯುವಂಥದ್ದು. ನುಡಿಬೆರಕೆ ದ್ವಿಭಾಷಿಕರಲ್ಲೇ ನಡೆಯುತ್ತದೆ ಎನ್ನುವಂತಿಲ್ಲ ಎಷ್ಟೋ ವೇಳೆಯಲ್ಲಿ ದ್ವಿಭಾಷಿಕ ಸನ್ನಿವೇಶಗಲ್ಲಿ ನಡೆಯುವ ಭಾಷಾಂಶಗಳನ್ನು ತಮ್ಮ ಭಾಷಿಕ ಸಂಕಥನಗಳಲ್ಲಿ ಸೇರಿಸಿಕೊಳ್ಳುತ್ತಾರೆ."[೧]

"ನುಡಿಬೆರಕೆಯಲ್ಲಿ ನೀಡುವ ಮತ್ತು ಪಡೆಯುವ ಭಾಷೆಗಳು ಅಂತರಾಟಕ್ಕೊಳಗಾಗುತ್ತವೆ. ನುಡಿಪಲ್ಲಟದಲ್ಲಾದರೂ ಈ ಭಾಷೆಗಳು ಒಂದರ ಪಕ್ಕದಲ್ಲೊಂದು ಕೆಲಸಮಾಡುತ್ತವೆ. ನುಡಿಬೆರಕೆ ಒಂದು ವಾಕ್ಯದೊಳಗೆ ನಡೆಯುತ್ತದೆ. ನುಡಿಪಲ್ಲಟ ವಾಕ್ಯಗಳ ನಡುವೆ ನಡೆಯುತ್ತದೆ. ನುಡಿಪಲ್ಲಟ ಸಾಮಾನ್ಯವಾಗಿ ಭಾಷಾ ಸಂದರ್ಭದಲ್ಲಿ ಉಂಟಾದ ಬದಲಾವಣೆಗೆ ಸಂವಾದಿಯಾಗಿ ನಡೆಯುತ್ತದೆ. ನುಡಿಬೆರಕೆಯಾದರೂ ಸಂದರ್ಭ ಬದಲಾಗದಿದ್ದರೂ ನಡೆಯುತ್ತದೆ."[೨]

ನುಡಿಬೆರಕೆಗೂ ಮತ್ತು ನುಡಿಪಲ್ಲಟಕ್ಕೂ ಇರುವ ಒಂದು ಮುಖ್ಯ ವ್ಯತ್ಯಾಸವನ್ನು ಗಮನದಲ್ಲಿಟ್ಟುಕೊಳ್ಳಬೇಕು. ಒಬ್ಬ ದ್ವಿಭಾಷಿ ತನ್ನ ಭಾಷೆಗಳಲ್ಲಿ ಯಾವುದೋ ಒಂದನ್ನು ಉಪಯೋಗಿಸಿದಾಗ ಒಂದು ರೀತಿಯ ಧ್ವನಿಯನ್ನು ಅಭಿವ್ಯಕ್ತಗೊಳಿಸುತ್ತಾನೆ. ಆ ವ್ಯಕ್ತಿ ಇನ್ನೊಂದು ಭಾಷೆಯನ್ನು ಅಭಿವ್ಯಕ್ತಪಡಿಸುವಾಗ ಬೇರೆ ರೀತಿಯಾದ ಉಚ್ಚಾರಣೆ ಕಂಡುಬರುತ್ತದೆ. ಮೊಳಕಾಲ್ಮೂರು ಪ್ರದೇಶದಲ್ಲಿ ನೆಲೆಸಿರುವ ಬುಡಕಟ್ಟು ಸಮುದಾಯವಾದ ಮ್ಯಾಸನಾಯಕರು ದ್ವಿಭಾಷಿಕರು. ಇವರಲ್ಲಿ ಈ ಮೇಲಿನ ವ್ಯತ್ಯಾಸವನ್ನು ಕಾಣಬಹುದು.

ಮೊಳಕಾಲ್ಮೂರು ಪ್ರದೇಶದಲ್ಲಿ ನೆಲೆಸಿರುವ ಈ ಸಮುದಾಯದವರಾಡುವ ಭಾಷೆ ಕನ್ನಡ ಭಾಷೆಯೋ ಅಥವಾ ತೆಲುಗು ಭಾಷೆಯೋ ಎನ್ನುವ ಅನುಮಾನಗಳಿಗೆ ಎಡೆಮಾಡಿಕೊಟ್ಟಿದೆ. ಇವರ ಕೌಟುಂಬಿಕ ವಲಯದ ಭಾಷೆಯಾದ ತೆಲುಗಿನಲ್ಲೂ ಮತ್ತು ವ್ಯವಹಾರಿಕ ಭಾಷೆಯಾದ ಕನ್ನಡದಲ್ಲೂ ನುಡಿಬೆರಕೆಯ ಪ್ರಕ್ರಿಯೆಯನ್ನು ಕಾಣಬಹುದು. ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯ ಪ್ರಕಾರ ಈ ಪ್ರಕ್ರಿಯೆ ಹೆಚ್ಚಾಗಿ ಅವಿದ್ಯಾವಂತರಾದ ಕೃಷಿಕಾರ್ಮಿಕ ಮಹಿಳೆಯರಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಕೆಲವೊಂದು ಉದಾಹರಣೆಗಳನ್ನು ಗಮನಿಸಬಹುದು.

| | | | |
|---|---|---|---|
| ಉದಾ : | ೧. | ಮ್ಯಾ.ಭಾ. | ಊರಿಕಿ ಪೂಯ್ಯಕಿ ರೊಕ್ಕಮು ಲೇದು |
| | | ಕನ್ನಡ | ಊರಿಗೆ ಹೋಗುವುದಕ್ಕೆ ರೊಕ್ಕವಿಲ್ಲ |

೨. ಮ್ಯಾ.ಭಾ. ಮೊಳಕಾಲ್ಮೂರುನಾನ ಗಲಾಟ ಸ್ಯಾನ ಆಯಿಂದಿ
ಕನ್ನಡ ಮೊಳಕಾಲ್ಮೂರುನಲ್ಲಿ ಗಲಾಟ ಬಹಳ ಆಗಿದೆ

೩. ಮ್ಯಾ.ಭಾ. ನೀಳ್ಳಕಿ ದಿನಾಲು ಗುದ್ದಲಾಡತಾರ
ಕನ್ನಡ ನೀರಿಗೆ ದಿನಾ ಜಗಳವಾಡುತ್ತಾರೆ.

೪. ಮ್ಯಾ.ಭಾ. ಬಸ್ಸು ರೈಟ್ ಯೇಳು ಅನಿಚಪ್ಪರಾ
ಕನ್ನಡ ಬಸ್ಸು ರೈಟ್ ಹೇಳು ಅಂತ ಹೇಳು

೫. ಮ್ಯಾ.ಭಾ. ದೇವಸಮುದ್ರಮುತಾನ ಗುಡ್ಡಮು ಎತ್ತರಮು ಆದ
ಕನ್ನಡ ದೇವಸಮುದ್ರದ ಹತ್ತಿರ ಗುಡ್ಡ ಎತ್ತರವಿದೆ.

೬. ಮ್ಯಾ.ಭಾ. ಮಾ ತಂಗಿ ಮಗುಡು ಊರಿಕಿ ಪೂಯ್ಯಡು
ಕನ್ನಡ ನಮ್ಮ ತಂಗಿ ಗಂಡನು ಊರಿಗೆ ಹೋಗಿದ್ದಾನೆ.

೭. ಮ್ಯಾ.ಭಾ. ರಾಮಮೂರ್ತಿ ಬಾಗ ಓತ್ತಾಡು
ಕನ್ನಡ ರಾಮಮೂರ್ತಿ ಚೆನ್ನಾಗಿ ಓದುತ್ತಾನೆ.

೮. ಮ್ಯಾ.ಭಾ. ಅಲ್ಸು ಪಂಡ್ಲು ಬಾಳಮು ಸೀಗವುಂಡವೆ
ಕನ್ನಡ ಹಲಸಿನಹಣ್ಣು ಬಹಳ ಸಿಹಿಯಾಗಿರುತ್ತವೆ.

ಮೇಲಿನ ವಾಕ್ಯಗಳು ತೆಲುಗಿನ ನಿಯಮದಲ್ಲಿದ್ದರು ಸಹ ಕನ್ನಡದ ಭಾಷಿಕ ಅಂಶಗಳನ್ನು ಕಾಣಬಹುದು. ಮ್ಯಾಸನಾಯಕರ ಕೌಟುಂಬಿಕ ವಲಯದ ಭಾಷೆಯಲ್ಲಿನ ನುಡಿಬೆರಕೆ ಪ್ರಕ್ರಿಯೆಯನ್ನು ಮೇಲಿನ ವಾಕ್ಯಗಳಲ್ಲಿ ಕಾಣಬಹುದು. ಕನ್ನಡದ ಪದಗಳಾದ ರೊಕ್ಕ, ಗಲಾಟೆ, ದಿನಾಲು, ಹೇಳು, ಮತ್ತು ಗುಡ್ಡ, ತಂಗಿ, ಓದು, ಹಲಸು ಮುಂತಾದ ಪದಗಳು ಇವರ ಸಂಭಾಷಣೆ ವಾಕ್ಯಗಳಲ್ಲಿ ಕಂಡುಬರುತ್ತವೆ.

ಮ್ಯಾಸನಾಯಕರ ವ್ಯವಹಾರಿಕ ಕನ್ನಡದಲ್ಲಿಯು ನುಡಿಬೆರಕೆಯ ಪ್ರಕ್ರಿಯೆಯನ್ನು ಕೆಲವೊಂದು ಉದಾಹರಣೆಗಳ ಮೂಲಕ ತಿಳಿಯಬಹದು.

ಉದಾ : ೧. ಬಸ್ಸು ಎಕ್ಕು ಜಲ್ದಿ ಟೈಮ ಆಗುತ್ತೆ
೨. ನಮ್ ವೋಲದಾಗ ಮಾಮಿಡಿ ಮರಗಳು ಬಾಳ್ ಐಯದ್ವ್
೩. ದೇವರ ಗುಡ್ಯಾಗ ಬಾಪ್ನಯ್ಯ ಇದ್ದಿಲ್ಲಾ
೪. ಮೈಮ್ಯಾಲೆ ಬಲ್ಲಿ ಬಿತ್ತು

ಕನ್ನಡದ ವಾಕ್ಯಗಳಲ್ಲಿ ತೆಲುಗಿನ ಪದಗಳು ಮಿಶ್ರಣವಾಗಿ ನುಡಿಬೆರಕೆಯ ಪ್ರಕ್ರಿಯೆ ಕಂಡುಬರುತ್ತದೆ. 'ಎಕ್ಕು', 'ಮಾಮಿಡಿ', 'ಬಾಪ್ನಯ್ಯ', 'ಬಲ್ಲಿ' ಮುಂತಾದವು ತೆಲುಗಿನ ಪದಗಳಾಗಿವೆ. ಈ ಸಮುದಾಯದವರೆಲ್ಲಾ

ಒಂದೆಡೆ ನೆಲೆಸಿರುವುದರಿಂದ ಹೆಚ್ಚಾಗಿ ತೆಲುಗಿನ ಸಾಮಾಜಿಕ ಸಂದರ್ಭಗಳಿಗಾಗಿ ದಿನನಿತ್ಯದ ವ್ಯವಹಾರಗಳಿಗೆ ತೆರೆದುಕೊಳ್ಳುವುದರಿಂದ ಕನ್ನಡ ಬಳಸುವ ಅವಕಾಶ ಹೆಚ್ಚು ಇರುವುದಿಲ್ಲವೆಂದು ತಿಳಿದುಬರುತ್ತದೆ.

ಕನ್ನಡದ ಸಂದರ್ಭದಲ್ಲಿ ನುಡಿಮಿಶ್ರಣದ ನಿಯೋಗಗಳನ್ನು ಕುರಿತಂತೆ ಎಸ್.ಎನ್.ಶ್ರೀಧರ್ (೧೯೯೫, ೧೦) ಅವರು ಚರ್ಚಿಸುವ ಸಂದರ್ಭವೊಂದನ್ನು ಗಮನಿಸಿದರೆ "ಒಬ್ಬ ದ್ವಿಭಾಷಿ ಅನೇಕ ಬಾರಿ ದ್ವಿಸಂಸ್ಕೃತಿಗೂ, ಬಹುಸಂಸ್ಕೃತಿಗೂ ಆಗಿರುವುದರಿಂದ ತನ್ನ ಎರಡು ಅಥವಾ ಹೆಚ್ಚು ಸಂಸ್ಕೃತಿಗಳನ್ನೊಳಗೊಂಡ ಹೆಚ್ಚು ಶ್ರೀಮಂತ, ಹೆಚ್ಚು ಸಂಕೀರ್ಣ ವ್ಯಕ್ತಿತ್ವ ಸಂವೇದನೆಯನ್ನು ಅಭಿವ್ಯಕ್ತಗೊಳಿಸಲು ಒಂದಕ್ಕಿಂತ ಹೆಚ್ಚು ಭಾಷೆಗಳ ಸಂಪನ್ಮೂಲಗಳನ್ನು ತೊಡಗಿಸಬೇಕಾಗುತ್ತದೆ. ತಾಂತ್ರಿಕ ವಿಷಯಗಳ ಚರ್ಚೆಯಲ್ಲಿ ಅವಶ್ಯಕವಾದ ಪರಿಭಾಷೆಯು ಇಲ್ಲದಿರುವಾಗ ಅಥವಾ ಒಬ್ಬ ಭಾಷಿಕನಿಗೆ ತಾತ್ಕಾಲಿಕವಾಗಿ ಆ ಪರಿಭಾಷೆಯು ಸಿದ್ಧಿಸದೆ ಇರುವಾಗ ನುಡಿಬೆರಕೆ ಉಪಯೋಗಕ್ಕೆ ಬರುತ್ತದೆ. ಒಂದು ಭಾಷೆಯ ಅರ್ಥದ ತೆರಪುಗಳನ್ನು ಅಥವಾ ವೈಯಕ್ತಿಕ (ತಾತ್ಕಲಿಕ) ಮರೆವನ್ನು ಮೀರಲು ಇನ್ನೊಂದು ಭಾಷೆಯನ್ನು ಬೆರೆಸುವುದು ಸಾಮಾನ್ಯ. ಭಾಷಾ ಮರ್ಯಾದೆಯ ದೃಷ್ಟಿಯಿಂದ ನಿಷಿದ್ಧವಾದ ಪದ ಅಥವಾ ಅರ್ಥಗಳನ್ನು ವ್ಯಕ್ತಪಡಿಸಲು ಒಂದು ಭಾಷೆಯಲ್ಲಿನ ರೂಢಿಗತ ಪದಗಳ ಸ್ಥಾನದಲ್ಲಿ ಫ್ಯಾಶನ್ ಬಲ್ ಪದಗಳನ್ನು ಉಪಯೋಗಿಸಿ ತಮ್ಮ ಆಧುನಿಕತೆಯನ್ನು ಸೂಚಿಸಲು ಭಾಷಿಕರ ಮಧ್ಯೆ ಇರುವ ಅಂತರವನ್ನು ಕಡಿಮೆಮಾಡಲು ನುಡಿಬೆರಕೆಯನ್ನು ಬಳಸುತ್ತಾರೆ. ಹೀಗೆ ನುಡಿಬೆರಕೆಯನ್ನು ದ್ವಿಭಾಷಿಕರು ಉಪಯೋಗಿಸುವಾಗ ಅವರ ಭಾಷೆಗಳ ರಚನಾತ್ಮಕ ಎಲ್ಲೆಗಳು ಸಡಿಲವಾಗುತ್ತವೆ. ಒಂದು ಭಾಷೆಯ ವಾಕ್ಯಾತ್ಮಕ ಲಕ್ಷಣಗಳು ಇನ್ನೊಂದು ಭಾಷೆಗೆ ವರ್ಗಾಯಿಸಲ್ಪಡುತ್ತವೆ."[೩]

ನುಡಿಜಿಗಿತವೂ ಸಹ ದ್ವಿಭಾಷಿಕರಲ್ಲಿ ಹೆಚ್ಚು ಕಾಣುತ್ತಿದೆ. ಮೊಳಕಾಲ್ಮೂರು ಪ್ರದೇಶದಲ್ಲಿ ನೆಲೆಸಿರುವ ಮ್ಯಾಸನಾಯಕರಲ್ಲಿ ಕೆಲವೊಂದು ಸಂದರ್ಭದಲ್ಲಿ ನುಡಿಜಿಗಿತ ಪ್ರಕ್ರಿಯೆ ಕಂಡುಬರುತ್ತದೆ. ವ್ಯಾಪಾರದ ಸಂದರ್ಭದಲ್ಲಿ ಇವರ ಮೊದಲ ಆಯ್ಕೆ ಕನ್ನಡವೇ ಆಗಿದ್ದರೂ ಸಹ ಎರಡನೆಯ ಆಯ್ಕೆ ತೆಲುಗು. ಅಪರಿಚಿತರನ್ನು ಮಾತನಾಡಿಸುವಾಗ ಮೊದಲು ಕನ್ನಡದಲ್ಲಿ ತದನಂತರ ತೆಲುಗಿನಲ್ಲಿ ಮಾತನಾಡುವುದು ಕಂಡುಬರುತ್ತದೆ. ಸಿನಿಮಾ, ನಾಟಕ ಇನ್ನಿತರ ಸಂಭಾಷಣೆಗಳನ್ನು ವಿವರಿಸುವ ಸಂದರ್ಭದಲ್ಲಿ, ರಾಜಕೀಯ ಭಾಷಣಗಳು ಮಾಡುವಾಗ, ಕನ್ನಡ ಭಾಷಿಕ ಸಂದರ್ಭಗಳಿಗೆ ತೆರೆದುಕೊಳ್ಳುವಾಗ, ಜಗಳದ ಸಂದರ್ಭದಲ್ಲಿ, ಆತ್ಮೀಯರೊಡನೆ ಮಾತನಾಡುವ ಸಂದರ್ಭಗಳಲ್ಲಿ ಮತ್ತು ಗುಪ್ತವಾದ ವಿಷಯಗಳನ್ನು ಮಾತನಾಡುವಾಗ, ಶೈಕ್ಷಣಿಕ ಸಂಬಂಧಿಸಿದ ವಿಷಯಗಳನ್ನು ಹೇಳುವಾಗ ಹೀಗೆ ಹಲವು ಸಂದರ್ಭದಲ್ಲಿ ನುಡಿಜಿಗಿತ ಉಂಟಾಗುತ್ತದೆ. ನುಡಿಜಿಗಿತದಲ್ಲಿ ಒಂದು ವಾಕ್ಯವನ್ನು ಒಂದು ಭಾಷೆಯ ನಿಯಮಾನುಸಾರ ರಚಿಸಿ, ಆನಂತರ ಹೊಸವಾಕ್ಯವನ್ನು ಇಡಿಯಾಗಿ ಇನ್ನೊಂದು ಭಾಷೆಯಲ್ಲಿ ರಚಿಸಿ ಬಳಸಲಾಗುತ್ತದೆ. ವಾಕ್ಯದ ಆಚೆಗಿನ ಹಂತದಲ್ಲಿ ಈ ಬೆರಕೆ ನಡೆಯುತ್ತದೆ. ಮ್ಯಾಸನಾಯಕರಲ್ಲಿ ನುಡಿಜಿಗಿತ ಪ್ರಕ್ರಿಯೆಯನ್ನು ಕಾಣಬಹುದು.

ಉದಾ : ೧. ಅಕ್ಕ ಟೊಮಾಟೊ ಎಷ್ಟು ರೂಪಾಯಿಗೆ ಕೆ.ಜಿ. ಮೂಡು ರೂಪಾಲಕಿ ಕೆ.ಜಿ. ಈಯಮ್ಮ

೨. ನಮ್ಮ ಊರಿನ್ಯಾಗ ಜಾತ್ರೆ ಆಗತದೆ ಬಾಳಮು ಜನಮು ವಸ್ತಾರ

೩. ನಮ್ಮ ವುಡಗನು ಮನಿಗೆ ಕಳಸಿರಿ ಸರ್ ಬಾಡನಾ ಇಂಟಿಕಿ ಪೋಮ್ಮಲೆ

೪. ಮೂನಾಡಲು ಬಾಗುಂಡಲೇದು ಇವತ್ತು ಡಾಕ್ಟರ್ ತ್ಯಾಕ ವೂಗಿದ್ದೆ

ಮೊಳಕಾಲ್ಮೂರು ಪ್ರದೇಶದಲ್ಲಿ ನೆಲೆಸಿರುವ ಮ್ಯಾಸನಾಯಕರು ದಿನನಿತ್ಯದ ವ್ಯವಹಾರಕ್ಕಾಗಿ ನೆರೆ ಹೊರೆ ಸಮುದಾಯದವರೊಂದಿಗೆ ಮತ್ತು ಪ್ರಾದೇಶಿಕ ಭಾಷೆಯಾದ ಕನ್ನಡದೊಂದಿಗೆ ವ್ಯವಹರಿಸುವದರಿಂದ ನುಡಿಜಿಗಿತ ಪ್ರಕ್ರಿಯೆ ಉಂಟಾಗುತ್ತದೆ. ಮೊಳಕಾಲ್ಮೂರು ಪೂರ್ವ ಭಾಗಕ್ಕೆ ಆಂಧ್ರಪ್ರದೇಶದ ಗಡಿಭಾಗದ ಜನಸಮುದಾಯದವರು ವ್ಯವಹಾರಕ್ಕಾಗಿ ಕನ್ನಡ ಪ್ರದೇಶಗಳಿಗೆ ಬಂದಾಗ ಈ ಪ್ರಕ್ರಿಯೆ ಕಂಡುಬರುತ್ತದೆ. ಈ ಸಮುದಾಯದವರಲ್ಲಿ ಹೆಚ್ಚಾಗಿ ವ್ಯಾಪಾರ ಸಂದರ್ಭದಲ್ಲಿ ಮತ್ತು ಶಾಲಾ ಕಾಲೇಜುಗಳಲ್ಲಿ ವ್ಯವಹರಿಸುವ ಸಂದರ್ಭದಲ್ಲಿ ಈ ಪ್ರಕ್ರಿಯ ಕಂಡುಬರುತ್ತದೆ.

## ೫. ಭಾಷಾ ಮನೋಭಾವ ಮತ್ತು ಭಾಷಾ ನಡವಳಿಕೆ

ಎರಡು ಭಿನ್ನಭಾಷಾಗಳ ಸಂಪರ್ಕದಿಂದಾಗಿ ಉಂಟಾದ ದ್ವಿಭಾಷಾ ಸಂದರ್ಭದಲ್ಲಿ ಭಾಷಿಕರಿಗೆ ಎರಡು ಭಾಷೆಗಳ ಬಗೆಗಿರುವ ಮನೋಭಾವ ಭಿನ್ನವಾಗಿರುತ್ತದೆ. ಒಂದು ಭಾಷೆಯ ಅಳಿವು - ಉಳಿವು, ಭಾಷಿಕರಲ್ಲಿನ ಮನೋಭಾವ, ಭಾಷಾ ಧೋರಣೆಗಳು ಬಹುಮುಖ್ಯವಾಗಿರುತ್ತವೆ. ಮ್ಯಾಸನಾಯಕರು ದ್ವಿಭಾಷಿಕರಾಗಿರುವುದ ರಿಂದ ಕನ್ನಡ ಮತ್ತು ತೆಲುಗು ಭಾಷೆಯ ಬಗ್ಗೆ ಇರುವ ಮನೋಭಾವವನ್ನು ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯ ಮೂಲಕ ಕೆಲವು ಸಂಗತಿಗಳನ್ನು ವಿವರಿಸಲಾಗಿದೆ. ಇವರಿಗೆ ಯಾವುದೇ ಭಾಷೆಯ ಬಗ್ಗೆ ದುರಾಭಿಮಾನವಿಲ್ಲ. ಎರಡು ಭಾಷೆಗಳನ್ನು ಗೌರವದಿಂದ ಕಾಣುತ್ತಾರೆ. ಆದರೆ ಮಾತೃಭಾಷೆಯಾದ ತೆಲುಗಿನಲ್ಲಿ ಮಾತನಾಡುವ ವ್ಯಕ್ತಿ ಕಂಡಾಗ ಇವರು ನಮ್ಮ ಸಮುದಾಯದ ವ್ಯಕ್ತಿಯಾಗಿರಬಹುದೆಂದು ಊಹಿಸುತ್ತಾರೆ. ಅವರನ್ನು ಅಭಿಮಾನದಿಂದ ಮಾತನಾಡಿಸಿ ಪರಿಚಯ ಮಾಡಿಕೊಳ್ಳುತ್ತಾರೆ.

ಕನ್ನಡ ಭಾಷೆಯನ್ನು ಮಾತನಾಡುವ ವ್ಯಕ್ತಿಗಳನ್ನು ಕಂಡಾಗ ಇವರು ನಮಗಿಂತ ಉನ್ನತ ವರ್ಗದವರು ಮೇಲುಜಾತಿಯವರು ಎಂಬ ಮನೋಭಾವನೆ ಮೂಡುತ್ತದೆ. ಈ ಸಮುದಾಯದವರು ವಾಸಿಸುವ ಸ್ಥಳಗಳಿಗೆ ರಾಜಕೀಯ ವ್ಯಕ್ತಿಗಳು ಮತಯಾಚಿಸಲು ಬಂದಾಗ ತೆಲುಗು ಭಾಷೆಯಲ್ಲಿ ಮಾತನಾಡಿ ನಮ್ಮವರು ಎಂಬ ಅಭಿಮಾನವನ್ನು ಮೂಡಿಸುತ್ತಾರೆ. ಇವರು ದಿನನಿತ್ಯದ ವ್ಯವಹಾರದಲ್ಲಿ ಕನ್ನಡವನ್ನು ಬಳಸಿ ಕೌಟುಂಬಿಕ ವಲಯದ ಸದಸ್ಯರೊಡನೆ ತೆಲುಗುಭಾಷೆಯನ್ನು ಮಾತನಾಡುವರು. ಇವರು, ಕ್ಷೇತ್ರಕಾರ್ಯದಲ್ಲಿ ಕೆಲವೊಂದು ಪ್ರಶ್ನೆಗಳಿಗೆ ಉತ್ತರವನ್ನು ನೀಡಿದರು. ಕನ್ನಡ ಭಾಷೆಯ ಮತ್ತು ತೆಲುಗು ಭಾಷೆಯ ಬಗ್ಗೆ ನಿಮ್ಮ ಅಭಿಪ್ರಾಯವೇನು ಎಂದು ಕೇಳಿದಾಗ ಕನ್ನಡ ಭಾಷೆಯು ಕಲಿಯಲು ಬಹು ಸುಲಭ ಮತ್ತು ಸುಂದರವಾಗಿದೆ, ತೆಲುಗುಭಾಷೆಯು ನಮ್ಮ ಮಾತೃಭಾಷೆಯಾದ ಕಾರಣ ವಂಶಪರಂಪರೆಯಿಂದ ಬೆಳೆದು ಬಂದಿರುವುದರಿಂದ ತೆಲುಗುಭಾಷೆಯ ಬಗ್ಗೆ ಅಭಿಮಾನವಿದೆ ಎಂದು ಹೇಳಿದರು. ಹಳೆತಮಾರಿನವರು ಮಹಿಳೆಯರಲ್ಲಿ ಕೃಷಿಕಾರ್ಮಿಕರಲ್ಲಿ ಇಂಥಹ ಭಾವನೆ ಕಂಡುಬರುತ್ತದೆ. ಆದರೆ, ಇತ್ತೀಚಿನ ಯುವಪೀಳಿಗೆ ಮತ್ತು ವಿದ್ಯಾವಂತರು ಕನ್ನಡ ಭಾಷೆಯ ಬಗ್ಗೆ ಒಳ್ಳೆಯ ಅಭಿಪ್ರಾಯವನ್ನು ಹೊಂದಿದ್ದಾರೆ.

ಈ ಸಮುದಾಯದವರು ಜನಪದ ಕಲೆಗಳಾದ ಬಯಲಾಟ, ಕೋಲಾಟ, ಭಜನೆ ಮುಂತಾದವುಗಳು ಕನ್ನಡದಲ್ಲಿ ಕೇಳಲು ಇಷ್ಟಪಡುತ್ತಾರೆ ಮತ್ತು ಸಿನಿಮಾ ಮತ್ತು ಟಿ.ವಿ.ಯನ್ನು ತೆಲುಗಿನಲ್ಲಿ ವೀಕ್ಷಿಸಲು ಪ್ರಯತ್ನಿಸುತ್ತಾರೆ. ರೇಡಿಯೊದಲ್ಲಿ ವಾರ್ತೆಗಳನ್ನು ಕನ್ನಡದಲ್ಲಿ ಕೇಳಿ, ಚಿತ್ರಗೀತೆಗಳ ಮತ್ತು ಮನರಂಜನೆ ಕಾರ್ಯಕ್ರಮಗಳನ್ನು ತೆಲುಗಿನಲ್ಲಿ ಕೇಳುತ್ತಾರೆ. ಈ ಪ್ರದೇಶದಲ್ಲಿ ತೆಲುಗು ಚಿತ್ರಗಳನ್ನು ಹೆಚ್ಚಾಗಿ ಪ್ರದರ್ಶಿಸುವದರಿಂದ ತೆಲುಗು ಭಾಷೆಯ ಬಗ್ಗೆ ಇರುವ ಮನೋಭಾವ ತಿಳಿಯುತ್ತದೆ. ಮಾನವನು ತನ್ನಲ್ಲಿ ಅಂತರ್ಗತವಾಗಿರುವ ಸಂಸ್ಕೃತಿ, ನಂಬಿಕೆಗಳು, ಆಚರಣೆಗಳು, ಸಂಪ್ರದಾಯಗಳು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ರವಾನಿಸುವ ಸಂದರ್ಭದಲ್ಲಿ ಭಾಷೆಯ ಪಾತ್ರ ಮಹತ್ವವಾದದ್ದು. ಅದೇ ರೀತಿಯಾಗಿ ಭಾಷೆಯು ರವಾನಿಸಿಕೊಂಡು ಬರುತ್ತದೆ.

ಬೇರೆ ಯಾವುದೇ ಭಾಷಿಕ ಪ್ರದೇಶದಲ್ಲಿ ತಮ್ಮ ಸ್ವಭಾಷೆಯ ವ್ಯಕ್ತಿಯು ಕಂಡಾಗ ವಿಶಾಲವಾದ ಮನೋಭಾವದಿಂದ ನಮ್ಮವರು ಎಂಬ ಆತ್ಮಾಭಿಮಾನದಿಂದ ಸ್ವಾಗತಿಸಿ ಪರಿಚಿತರಂತೆ ನಡೆದುಕೊಳ್ಳುವದು ಸ್ವಾಭಾವಿಕ. ಮೊಳಕಾಲ್ಮೂರು ಪ್ರದೇಶದ ಮ್ಯಾಸನಾಯಕರು ದ್ವಿಭಾಷಿಕರಾಗಿರುವುದರಿಂದ ಎರಡು ಭಾಷೆಗಳನ್ನು ಕಲಿತು, ಸಹಬಾಳ್ವೆ, ಸಹಜೀವನ ನಡೆಸುತ್ತಿದ್ದಾರೆ. ಕೆಲವೊಂದು ಸಂದರ್ಭದಲ್ಲಿ ರಾಜಕೀಯ ಗಡಿಗಳನ್ನು ಮೀರಿ ಭಾಷೆಯೂ ಭಾಷಿಕರಲ್ಲಿ ನೆಲೆಗೊಂಡಿರುವುದಕ್ಕೆ ಇಂತಹ ಮನೋಭಾವನೆಗಳೇ ಕಾರಣವೆಂದರೆ ತಪ್ಪಾಗಲಾರದು.

## ೬. ಭಾಷಾ ಸಂಗೋಪನೆ ಪ್ರಕ್ರಿಯೆ

ಸಾಮಾಜಿಕ ಭಾಷಾಶಾಸ್ತ್ರದ ನೆಲೆಯಲ್ಲಿ ದ್ವಿಭಾಷಿಕರ ಮತ್ತು ಬಹುಭಾಷಿಕರ ಬಗೆಗೆ ಅಧ್ಯಯನಗಳನ್ನು ಮಾಡುವ ಸಂದರ್ಭದಲ್ಲಿ ಗುರ್ತಿಸಲಾದ ಪರಿಕಲ್ಪನೆಗಳಲ್ಲಿ ಭಾಷಾ ಸಂಗೋಪನಾ ಪ್ರಕ್ರಿಯೆ ಪ್ರಮುಖವಾಗಿದೆ. ಪಶ್ಚಿಮದ ರಾಷ್ಟ್ರಗಳಲ್ಲಿ ೧೯೬೦-೭೦ರ ದಶಕಗಳಿಂದ ಈಚೆಗೆ ಈ ಪರಿಕಲ್ಪನೆಯ ಬಗೆಗೆ ಹೆಚ್ಚಿನ ಅಧ್ಯಯನಗಳಾಗಿವೆ. ಭಾರತದಲ್ಲಿ ೧೯೭೦-೮೦ರ ದಶಕದಿಂದಿಚೆಗೆ ಸಾಮಾಜಿಕ ಭಾಷಾಶಾಸ್ತ್ರದ ನೆಲೆಯಲ್ಲಿ ಅಧ್ಯಯನ ಮಾಡುವವರು ಈ ಪ್ರಕ್ರಿಯೆಯನ್ನು ಮುಖ್ಯವಾಗಿಟ್ಟುಕೊಂಡು ಅಧ್ಯಯನ ಮಾಡಿದ್ದಾರೆ. ಇಂಗ್ಲೀಷಿನ "Language Maintanace" ಎನ್ನುವ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಭಾಷಾ ಸಂಗೋಪನೆ ಎಂದು ಕರೆಯುತ್ತಾರೆ. ಭಾಷಾ ಸಂಗೋಪನೆ ಎಂದರೆ ಭಾಷಾ ರಕ್ಷಣೆ, ಭಾಷಾ ಉಳಿಸಿಕೊಳ್ಳುವಿಕೆ ಎಂದರ್ಥ. ದ್ವಿಭಾಷಿಕರು ತಮ್ಮ ಮಾತೃಭಾಷೆಯನ್ನು ಆಪ್ತ ವಲಯಗಳಲ್ಲಿ ಉಳಿಸಿಕೊಳ್ಳಲು ಪ್ರಯತ್ನಿಸುವುದೇ ಭಾಷಾಸಂಗೋಪನೆ ಎಂದು ಕರೆಯುವರು.

ಮ್ಯಾಸನಾಯಕ ಸಮುದಾಯದವರು ದ್ವಿಭಾಷಿಕರು. ಇವರ ಕೌಟುಂಬಿಕ ವಲಯದ ತೆಲುಗು ಭಾಷೆಯನ್ನು ಯಾವ ರೀತಿ ಸಂಗೋಪನೆ ಮಾಡುತ್ತಾರೆ ಎಂಬುದನ್ನು ತಿಳಿಯಬಹುದು. ಈ ಭಾಷಾ ಸಂಗೋಪನ ಪ್ರಕ್ರಿಯೆ ವ್ಯಕ್ತಿಯಿಂದ ವ್ಯಕ್ತಿಗೆ ತಲೆಮಾರಿನಿಂದ ತಲೆಮಾರಿಗೆ ಮತ್ತು ಸ್ತ್ರೀಯರಲ್ಲಿ ಪುರುಷರಲ್ಲಿ ವಿದ್ಯಾವಂತರಲ್ಲಿ

ಅವಿದ್ಯಾವಂತರಲ್ಲಿ ಭಿನ್ನವಾಗಿ ಬಳಕೆಯಾಗುತ್ತದೆ. ಒಂದು ಸಮುದಾಯದವು ತನಗೆ ವಂಶಪರಂಪರೆಯಿಂದ ಬಂದ ಸಂಸ್ಕೃತಿ, ಸಂಪ್ರದಾಯ, ನಂಬಿಕೆ, ಆಚರಣೆಗಳನ್ನು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಭಾಷೆಯ ಮೂಲಕ ರವಾನಿಸಿಕೊಂಡು ಬಂದಿರುತ್ತದೆ. ಅದೇ ರೀತಿಯಾಗಿ ತಮ್ಮ ಭಾಷಾ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುತ್ತಾರೆ. ಈ ಸಮುದಾಯದವರಿಗೆ ವ್ಯವಹಾರಿಕ ಭಾಷೆಯಾದ ಕನ್ನಡ ಪರಿಚಯವಿದ್ದರೂ ಸಹ ಯಾವುದೇ ವಿಷಯವನ್ನು ಸ್ಪಷ್ಟವಾಗಿ ಸಮರ್ಥನೆ ಮಾಡುವ ಸಂದರ್ಭದಲ್ಲಿ ತಮ್ಮ ಮೂಲಭಾಷೆಯನ್ನು ಬಳಸುತ್ತಾರೆ. ಈ ರೀತಿಯಾಗಿ ಸಂಗೋಪನ ಪ್ರಕ್ರಿಯೆ ನಡೆಯುತ್ತದೆ.

"ಒಂದೇ ಭಾಷಾ ಕುಟುಂಬಗಳು ಹೆಚ್ಚು ಹತ್ತಿರವಿದ್ದಾಗ ಭಾಷಾ ಸಂಗೋಪನಾ ಕ್ರಿಯೆ ನಡೆಯಲು ಸಾಧ್ಯವಾಗುತ್ತದೆ. ಉದಾ : ಬ್ರಿಟನ್ನಿನಲ್ಲಿರುವ ಭಾರತೀಯರು ಮತ್ತು ಪಾಕಿಸ್ತಾನಿಯರು ಕ್ರಮವಾಗಿ ಗುಜರಾತಿ ಮತ್ತು ಪಂಜಾಬಿಯನ್ನು ಉಳಿಸಿಕೊಂಡಿರುವ ಸಂದರ್ಭಗಳು ಕಂಡುಬರುತ್ತವೆ. ಅದೇ ರೀತಿಯಾಗಿ ಬೀದರನಲ್ಲಿರುವ ಗೂಂಡರು ಹಲವಾರು ನಿಯಮಗಳನ್ನು ಹಾಕಿಕೊಳ್ಳುವುದರ ಮೂಲಕ ತಮ್ಮ ಗೂಂಡಿ ಭಾಷೆಯನ್ನು ಸಂಗೋಪನೆ ಮಾಡಿಕೊಳ್ಳುವ ಸಂದರ್ಭ ಕಂಡುಬರುತ್ತದೆ. ಒರಿಸ್ಸಾದಲ್ಲಿರುವ ಕೊಂಡ ಬುಡಕಟ್ಟು ಜನರು ತಮ್ಮ ಕುಯಿ ಭಾಷೆಯನ್ನು ಮನೆ ಮತ್ತು ಒಳಗುಂಪುಗಳಲ್ಲಿ ಮತ್ತು ಒರಿಯಾ ಭಾಷೆಯನ್ನು ಹೊರಗುಂಪುಗಳಲ್ಲಿ ಬಳಸುತ್ತಿರುವ ಸಂದರ್ಭಗಳು ದೆಹಲಿಯಲ್ಲಿರುವ ಪಂಜಾಬಿಗಳು ತಮ್ಮ ಪಂಜಾಬಿ ಭಾಷೆಯನ್ನು ಆಪ್ತ ವಲಯಗಳಾದ ಮನೆ, ಸ್ನೇಹಿತರು ಸಂಬಂಧಿಗಳು ಇತ್ಯಾದಿ ಆವರಣಗಳಲ್ಲಿ ಉಳಿಸಿಕೊಂಡು ಹಿಂದಿ, ಇಂಗ್ಲಿಶ್ ಭಾಷೆಯನ್ನು ಪ್ರಧಾನ ಆವರಣಗಳಲ್ಲಿ ಬಳಸುತ್ತಿರುವ ಸಂದರ್ಭಗಳು. ಕಮಲ್ ಕೆ. ಶ್ರೀಧರ್ (೧೯೮೯) ಅವರ ಅಧ್ಯಯನದಲ್ಲಿ ನ್ಯೂಯರ್ಕ್‌ನಲ್ಲಿರುವ ಕನ್ನಡಿಗರು, ಸ್ನೇಹಿತರು, ಸಂಬಂಧಿಗಳು, ಮನೆ ಮುಂತಾದ ಕಡೆಗಳಲ್ಲಿ ಕನ್ನಡವನ್ನು ಉಳಿಸಿಕೊಂಡಿರುವ ಸಂದರ್ಭಗಳು ಭಾಷಾ ಸಂಗೋಪನೆಗೆ ಉದಾಹರಣೆ ಗಳಾಗಿವೆ."[೪] ಅದೇ ರೀತಿಯಾಗಿ ಮೊಳಕಾಲ್ಮೂರು ಪ್ರದೇಶದಲ್ಲಿ ನೆಲೆಸಿರುವ ಮ್ಯಾಸನಾಯಕ ಸಮುದಾಯ ದವರು ತಮ್ಮ ಆಪ್ತವಲಯಗಳಾದ ಮನೆ, ಸಂಬಂಧಿಗಳು, ಸ್ನೇಹಿತರು ಮುಂತಾದ ಕಡೆಗಳಲ್ಲಿ ತೆಲುಗು ಭಾಷೆಯನ್ನು ಮತ್ತು ಹೊರ ಆವರಣಗಳಾದ ಮಾರುಕಟ್ಟೆ, ಸಾರ್ವಜನಿಕ ಸ್ಥಳಗಳಲ್ಲಿ, ಶಾಲಾ ಕಾಲೇಜುಗಳಲ್ಲಿ ಕನ್ನಡವನ್ನು ಬಳಸುವುದು ಕಂಡುಬರುತ್ತದೆ. ಹೀಗೆ ಭಾಷೆಯನ್ನು ಯಾವುದಾದರೊಂದು ರೂಪದಲ್ಲಿ ಭಾಷೆಯನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಾರೆ.

ಮೊಳಕಾಲ್ಮೂರು ಪ್ರದೇಶದಲ್ಲಿ ಅನೇಕ ಶತಮಾನಗಳಿಂದಲೂ ನೆಲೆಸಿರುವ ಮ್ಯಾಸನಾಯಕ ಸಮುದಾಯದವರು ದ್ವಿಭಾಷಾ ಪರಿಸರದಲ್ಲಿ ಜೀವಿಸುತ್ತಿದ್ದಾರೆ. ಮ್ಯಾಸನಾಯಕರು ತಮ್ಮ ಮಾತೃಭಾಷೆಯನ್ನು ಮತ್ತು ಪ್ರಾದೇಶಿಕ ಭಾಷೆಯನ್ನು ಯಾವ ಯಾವ ವಲಯಗಳಲ್ಲಿ ಉಳಿಸಿಕೊಳ್ಳಲು ಪ್ರಯತ್ನಿಸುತ್ತಾರೆ ಎಂಬುದನ್ನು ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯಿಂದ ವಿವರಿಸಲಾಗುವುದು. ಪುರುಷರಲ್ಲಿ ಮತ್ತು ಸ್ತ್ರೀಯರಲ್ಲಿ ಕನ್ನಡ ಮತ್ತು ತೆಲುಗುಭಾಷೆಯನ್ನು ಯಾವ ರೀತಿ ಸಂಗೋಪನೆ ಮತ್ತು ಪಲ್ಲಟಗೊಳ್ಳುತ್ತದೆ ಎಂಬುದನ್ನು ಕೋಷ್ಟಕಗಳಲ್ಲಿ ಮಾಹಿತಿಯನ್ನು ನೀಡಲಾಗಿದೆ.

## ಕೊಷ್ಟಕ - ೧

## ಪುರುಷರ ಭಾಷಾ ಬಳಕೆಯ ಆವರಣಗಳು

| ಕ್ರ. ಸಂ. | ವಯಸ್ಸು | ವೃತ್ತಿ | ಮನೆಯಲ್ಲಿ | ಸಂಬಂಧಿಕ ರೊಂದಿಗೆ | ಸ್ನೇಹಿತರ ಜೊತೆ | ಅಕ್ಕಪಕ್ಕದವ ರೊಂದಿಗೆ | ಆಚರಣೆ ಗಳಲ್ಲಿ | ಮಾರುಕಟ್ಟೆ ಯಲ್ಲಿ | ಕಛೇರಿ | ಶಾಲೆ | ಕೆಲಸಮಾಡುವಲ್ಲಿ | ಅಪರಿಚಿತ ರೊಂದಿಗೆ |
|---|---|---|---|---|---|---|---|---|---|---|---|---|
| ೧ | ೧೫ | ವಿದ್ಯಾರ್ಥಿ | ತೆಲುಗು | ತೆಲುಗು | ತೆಲುಗು/ಕನ್ನಡ | ತೆಲುಗು/ಕನ್ನಡ | ತೆಲುಗು | ಕನ್ನಡ | ಕನ್ನಡ | ಕನ್ನಡ | ಕನ್ನಡ | ಕನ್ನಡ |
| ೨. | ೨೫ | ಕೂಲಿ | ತೆಲುಗು | ತೆಲುಗು | ತೆಲುಗು/ಕನ್ನಡ | ತೆಲುಗು/ಕನ್ನಡ | ತೆಲುಗು | ಕನ್ನಡ | ಕನ್ನಡ | ಕನ್ನಡ | ಕನ್ನಡ/ತೆಲುಗು | ಕನ್ನಡ |
| ೩. | ೪೦ | ವ್ಯವಸಾಯ | ತೆಲುಗು | ತೆಲುಗು | ತೆಲುಗು | ತೆಲುಗು/ಕನ್ನಡ | ತೆಲುಗು | ಕನ್ನಡ/ತೆಲುಗು | ಕನ್ನಡ | ಕನ್ನಡ | ಕನ್ನಡ/ತೆಲುಗು | ಕನ್ನಡ /ತೆಲುಗು |
| ೪. | ೫೫ | ಕೂಲಿ | ತೆಲುಗು | ತೆಲುಗು | ತೆಲುಗು | ತೆಲುಗು/ಕನ್ನಡ | ತೆಲುಗು | ಕನ್ನಡ/ತೆಲುಗು | ಕನ್ನಡ | ಕನ್ನಡ | ತೆಲುಗು | ಕನ್ನಡ /ತೆಲುಗು |
| ೫. | ೭೦ | ಕೂಲಿ | ತೆಲುಗು | ತೆಲುಗು | ತೆಲುಗು | ತೆಲುಗು/ಕನ್ನಡ | ತೆಲುಗು | ತೆಲುಗು/ಕನ್ನಡ | ಕನ್ನಡ | ತೆಲುಗು | ತೆಲುಗು | ತೆಲುಗು |

ಕೊಷ್ಟಕ - ೧ರಲ್ಲಿ ಮ್ಯಾಸನಾಯಕರ ಸಮುದಾಯದವರ ಪುರುಷಭಾಷಾ ಬಳಕೆಯ ಆವರಣಗಳನ್ನು ತಿಳಿಸಲಾಗಿದೆ. ಪುರುಷರು ಸಾಮಾನ್ಯವಾಗಿ ಕೌಟುಂಬಿಕ ವಲಯಗಳಾದ ಮನೆ, ಸಂಬಂಧಿಕರು, ಸ್ನೇಹಿತರು ಮತ್ತು ಮುಂತಾದ ವಲಯಗಳಲ್ಲಿ ತೆಲುಗು ಭಾಷೆಯನ್ನು ಬಳಸುತ್ತಾರೆ. ಪ್ರಧಾನ ಆವಣರಣಗಳಲ್ಲಿ ಕನ್ನಡ ಭಾಷೆಯನ್ನು ಬಳಸುವುದು ಕಂಡುಬರುತ್ತದೆ. ಹಳೆತಲೆಮಾರಿನವರು ಎಲ್ಲಾ ಆವರಣಗಳಲ್ಲಿ ತೆಲುಗು ಭಾಷೆಯನ್ನು ಹೆಚ್ಚಾಗಿ ಉಳಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ವಿದ್ಯಾವಂತ ಪುರುಷರು ಮತ್ತು ಹೊಸ ತಲೆಮಾರಿನವರು ತೆಲುಗು ಭಾಷೆಯಿಂದ ಕನ್ನಡಭಾಷೆಗೆ ಪಲ್ಲಟಗೊಳ್ಳುವದನ್ನು ಕಾಣಬಹುದು. ಇವರು ವ್ಯವಹಾರಿಕ ವಲಯದಲ್ಲಿ ಕನ್ನಡವನ್ನು ಸ್ಪಷ್ಟವಾಗಿ ಬಳಸುತ್ತಾರೆ. ಒಟ್ಟಾರೆಯಾಗಿ ಮ್ಯಾಸನಾಯಕರು ತಮ್ಮ ಭಾಷೆಯನ್ನು ಸಂಗೋಪನೆ ಮಾಡಿಕೊಳ್ಳುವುದರ ಮೂಲಕ ಕನ್ನಡ ಭಾಷೆಗೆ ಪಲ್ಲಟಗೊಳ್ಳುವುದು ಕಂಡುಬರುತ್ತದೆ.

ನಕ್ಷೆ - ೧ರಲ್ಲಿ ಪುರುಷರ ಭಾಷಾ ಬಳಕೆಯ ಆವರಣಗಳನ್ನು ವಿವರಿಸಲಾಗಿದೆ. ೧೫ ವರ್ಷದ ಪುರುಷರು ಕನ್ನಡವನ್ನು ೭ ಆವರಣಗಳಲ್ಲಿ ಬಳಸಿದರೆ, ತೆಲುಗು ಭಾಷೆಯನ್ನು ೫ ಆವರಣಗಳಲ್ಲಿ ದ್ವಿಭಾಷೆಯನ್ನು ೨ ಆವರಣಗಳಲ್ಲಿ ಬಳಸುವುದು ಕಂಡುಬರುತ್ತದೆ. ೨೫ ವರ್ಷದ ಪುರುಷರು ಕನ್ನಡವನ್ನು ೭ ಆವರಣಗಳಲ್ಲಿ, ತೆಲುಗುಭಾಷೆಯನ್ನು ೬ ಆವರಣಗಳಲ್ಲಿ, ದ್ವಿಭಾಷೆಯನ್ನು ೩ ಆವರಣಗಳಲ್ಲಿ ಬಳಸುವುದು ಕಂಡುಬರುತ್ತದೆ. ೪೦ ವರ್ಷದ ಪುರುಷರು ೬ ಆವರಣಗಳಲ್ಲಿ ಕನ್ನಡವನ್ನು ೮ ಆವರಣಗಳಲ್ಲಿ ತೆಲುಗು ಭಾಷೆಯನ್ನು ೪ ಆವರಣಗಳಲ್ಲಿ ದ್ವಿಭಾಷೆಯನ್ನು ಬಳಸುವುದು ಕಂಡುಬರುತ್ತದೆ. ೫೫ ವರ್ಷದ ಪುರುಷರು ೫ ಆವರಣಗಳಲ್ಲಿ ಕನ್ನಡವನ್ನು ೮ ಆವರಣಗಳಲ್ಲಿ ತೆಲುಗು ಭಾಷೆಯನ್ನು ೩ ಆವರಣಗಳಲ್ಲಿ ದ್ವಿಭಾಷೆಯನ್ನು ಬಳಸುವುದು ಕಂಡುಬರುತ್ತದೆ. ೭೦ ವರ್ಷದ ಪುರುಷರು ೩ ಆವರಣಗಳಲ್ಲಿ ಕನ್ನಡವನ್ನು ೯ ಆವರಣಗಳಲ್ಲಿ ತೆಲುಗು ಭಾಷೆಯನ್ನು, ೨ ಆವರಣಗಳಲ್ಲಿ ದ್ವಿಭಾಷೆಯನ್ನು ಬಳಸುವುದು ಕಂಡುಬರುತ್ತದೆ. ಇಲ್ಲಿ ಮುಖ್ಯವಾಗಿ ಗಮನಿಸುವುದನೆಂದರೆ ಹಳೆ ತಲೆಮಾರಿನವರು ತೆಲುಗು ಭಾಷೆಯನ್ನು ಸಂಗೋಪನೆ ಮಾಡಿದರೆ ಹೊಸ ತಲೆಮಾರಿನವರು ತೆಲುಗು ಭಾಷೆಯನ್ನು ಸಂಗೋಪನೆ ಮಾಡುವುದರೊಂದಿಗೆ ಕನ್ನಡ ಭಾಷೆಗೆ ಪಲ್ಲಟಗೊಳ್ಳುವದು ಕಂಡುಬರುತ್ತದೆ. ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ, ಪ್ರಾದೇಶಿಕ ಕಾರಣಗಳಿಂದ ತೆಲುಗುಭಾಷೆಯಿಂದ ಕನ್ನಡ ಭಾಷೆಗೆ ಪಲ್ಲಟಗೊಳ್ಳುವುದು ಕಂಡುಬರುತ್ತದೆ.

ನಕ್ಷೆ ೧ರಲ್ಲಿರುವ ವಯಸ್ಸಿನ ವಿವರಗಳು ಹೀಗಿವೆ

| ಸಂಖ್ಯೆ | ಸೂಚಿಸುವ ವಯಸ್ಸು |
|---|---|
| ೧ | ೧೫ |
| ೨ | ೨೫ |
| ೩ | ೪೦ |
| ೪ | ೫೫ |
| ೫ | ೭೦ |

## ಕೊಷ್ಟಕ - ೨

## ಮಹಿಳೆಯರ ಭಾಷಾ ಬಳಕೆಯ ಆವರಣಗಳು

| ಕ್ರ. ಸಂ. | ವಯಸ್ಸು | ವೃತ್ತಿ | ಮನೆಯಲ್ಲಿ | ಸಂಬಂಧಿಕರೊಂದಿಗೆ | ಸ್ನೇಹಿತರ ಜೊತೆ | ಅಕ್ಕಪಕ್ಕದವರೊಂದಿಗೆ | ಆಚರಣೆಗಳಲ್ಲಿ | ಮಾರುಕಟ್ಟೆಯಲ್ಲಿ | ಕಛೇರಿ | ಶಾಲೆ | ಕೆಲಸ ಮಾಡುವಲ್ಲಿ | ಅಪರಿಚಿತರೊಂದಿಗೆ |
|---|---|---|---|---|---|---|---|---|---|---|---|---|
| ೧ | ೧೫ | ವಿದ್ಯಾರ್ಥಿ | ತೆಲುಗು | ತೆಲುಗು | ತೆಲುಗು/ಕನ್ನಡ | ತೆಲುಗು/ಕನ್ನಡ | ತೆಲುಗು | ಕನ್ನಡ | ಕನ್ನಡ | ಕನ್ನಡ | ಕನ್ನಡ | ಕನ್ನಡ |
| ೨. | ೨೫ | ಕೂಲಿ | ತೆಲುಗು | ತೆಲುಗು | ತೆಲುಗು | ತೆಲುಗು/ಕನ್ನಡ | ತೆಲುಗು | ತೆಲುಗು/ಕನ್ನಡ | ಕನ್ನಡ | ಕನ್ನಡ | ಕನ್ನಡ | ಕನ್ನಡ |
| ೩. | ೪೦ | ವ್ಯವಸಾಯ | ತೆಲುಗು | ತೆಲುಗು | ತೆಲುಗು | ತೆಲುಗು/ಕನ್ನಡ | ತೆಲುಗು | ತೆಲುಗು/ಕನ್ನಡ | ಕನ್ನಡ | ಕನ್ನಡ | ತೆಲುಗು/ಕನ್ನಡ | ತೆಲುಗು |
| ೪. | ೫೫ | ವ್ಯವಸಾಯ | ತೆಲುಗು | ತೆಲುಗು | ತೆಲುಗು | ತೆಲುಗು/ಕನ್ನಡ | ತೆಲುಗು | ತೆಲುಗು/ಕನ್ನಡ | ತೆಲುಗು/ಕನ್ನಡ | ಕನ್ನಡ | ತೆಲುಗು | ತೆಲುಗು |
| ೫. | ೭೦ | ಕೂಲಿ | ತೆಲುಗು | ತೆಲುಗು | ತೆಲುಗು | ತೆಲುಗು | ತೆಲುಗು | ತೆಲುಗು/ಕನ್ನಡ | ಕನ್ನಡ/ತೆಲುಗು | ಕನ್ನಡ | ತೆಲುಗು | ತೆಲುಗು |

ಕೊಷ್ಟಕ - ೨ರಲ್ಲಿ ಮ್ಯಾಸನಾಯಕರ ಸಮುದಾಯದ ಮಹಿಳೆಯರ ಭಾಷಾ ಬಳಕೆಯ ಆವರಣಗಳನ್ನು ತಿಳಿಸಲಾಗಿದೆ. ಈ ಸಮುದಾಯದ ಮಹಿಳೆಯರು ಹೆಚ್ಚಾಗಿ ಅವಿದ್ಯಾವಂತರಾಗಿರುವುದರಿಂದ ಮತ್ತು ಕಟುಂಬೇತರ ವ್ಯವಹಾರಿಕ ಬಳಕೆ ಕಡಿಮೆ ಇರುವುದರಿಂದ ಏಕಭಾಷಿಕರಾಗಿರುವುದು ಕಂಡುಬರುತ್ತದೆ. ಹೊಸತಲೆಮಾರಿನ ಮಹಿಳೆಯರಲ್ಲಿ ಕನ್ನಡ ಭಾಷೆಯನ್ನು ಬಳಸುವುದನ್ನು ಕಾಣಬಹುದು. ಹಳೆತಲೆಮಾರಿನ ಮಹಿಳೆಯರಿಗೆ ಕನ್ನಡಭಾಷೆಯನ್ನು ಅರ್ಥಮಾಡಿಕೊಳ್ಳುವ ಗ್ರಹಿಕೆಯಿರುತ್ತದೆ. ಅಭಿವ್ಯಕ್ತಿ ಮಾಧ್ಯಮ ತೆಲುಗಿನಿಂದ ಕೂಡಿರುತ್ತದೆ. ಇವರು ತೆಲುಗು ಭಾಷೆಯನ್ನು ಸಂಗೋಪನೆ ಮಾಡಿಕೊಳ್ಳುವುದು ಕಾಣಬಹುದು.



ನಕ್ಷೆ - ೨ ಮಹಿಳೆಯರ ಭಾಷಾ ಬಳಕೆಯ ಆವರಣಗಳು
ಭಾಷಾ ಬಳಕೆಯ ಆವರಣಗಳು
ವಯಸ್ಸು
ಕನ್ನಡ
ದ್ವಿಭಾಷಿಕತೆ
ತೆಲುಗು

ನಕ್ಷೆ - ೨ರಲ್ಲಿ ಮಹಿಳೆಯರ ಭಾಷಾ ಬಳಕೆಯ ಆವರಣಗಳನ್ನು ವಿವರಿಸಲಾಗಿದೆ. ೧೫ ವರ್ಷದ ಮಹಿಳೆಯರು ೭ ಆವರಣಗಳಲ್ಲಿ ಕನ್ನಡವನ್ನು ೫ ಆವರಣಗಳಲ್ಲಿ ತೆಲುಗನ್ನು ಮತ್ತು ೨ ಆವರಣಗಳಲ್ಲಿ ದ್ವಿಭಾಷೆಗಳನ್ನು ಬಳಸುವುದು ಕಂಡುಬರುತ್ತದೆ. ೨೫ ವರ್ಷದ ಮಹಿಳೆಯರು ಕನ್ನಡವನ್ನು ೬ ಆವರಣಗಳಲ್ಲಿ, ತೆಲುಗನ್ನು ೬ ಆವರಣಗಳಲ್ಲಿ, ದ್ವಿಭಾಷೆಯನ್ನು ೨ ಆವರಣಗಳಲ್ಲಿ ಬಳಸುವುದು ಕಂಡುಬರುತ್ತದೆ. ೪೦ ವರ್ಷದ ಮಹಿಳೆಯರು ೫ ಆವರಣಗಳಲ್ಲಿ ಕನ್ನಡವನ್ನು ೮ ಆವರಣಗಳಲ್ಲಿ ತೆಲುಗನ್ನು ೩ ಆವರಣಗಳಲ್ಲಿ ದ್ವಿಭಾಷೆಯನ್ನು ಬಳಸುವುದು ಕಂಡುಬರುತ್ತದೆ. ೫೫ ವರ್ಷದ ಮಹಿಳೆಯರು ಕನ್ನಡವನ್ನು ೪ ಆವರಣಗಳಲ್ಲಿ, ತೆಲುಗನ್ನು ೯ ಆವರಣಗಳಲ್ಲಿ, ದ್ವಿಭಾಷೆಯನ್ನು ೩ ಆವರಣಗಳಲ್ಲಿ ಬಳಸುವುದು ಕಂಡುಬರುತ್ತದೆ. ೭೦ ವರ್ಷದ ಮಹಿಳೆಯರು ೩ ಆವರಣಗಳಲ್ಲಿ ಕನ್ನಡವನ್ನು, ೯ ಆವರಣಗಳಲ್ಲಿ ತೆಲುಗು ಭಾಷೆಯನ್ನು, ೨ ಆವರಣಗಳಲ್ಲಿ ದ್ವಿಭಾಷೆಯನ್ನು ಬಳಸುವುದು ಕಂಡುಬರುತ್ತದೆ. ಮಹಿಳೆಯರು ಹೆಚ್ಚಾಗಿ ತೆಲುಗು ಭಾಷೆಯನ್ನು ಸಂಗೋಪನೆ ಮಾಡುವುದರೊಂದಿಗೆ ಮಂದಗತಿಯಿಂದ ಕನ್ನಡ ಭಾಷೆಗೆ ಪಲ್ಲಟಗೊಳ್ಳುವುದು ಕಂಡುಬರುತ್ತದೆ.

ನಕ್ಷೆ ೨ರಲ್ಲಿರುವ ವಯಸ್ಸಿನ ವಿವರಗಳು ಹೀಗಿವೆ

| ಸಂಖ್ಯೆ | ಸೂಚಿಸುವ ವಯಸ್ಸು |
|---|---|
| ೧ | ೧೫ |
| ೨ | ೨೫ |
| ೩ | ೪೦ |
| ೪ | ೫೫ |
| ೫ | ೭೦ |

**ಅಡಿಟಿಪ್ಪಣಿಗಳು**

೧. ಕೆ.ವಿ.ನಾರಾಯಣ, ದ್ವಿಭಾಷಿಕತೆ, ೧೯೯೮, ಪು. ೧೯

೨. ಎಸ್.ಎನ್.ಶ್ರೀಧರ್, ಇಂದಿನ ಕನ್ನಡ ರಚನೆ ಬಳಕೆ, ೧೯೯೫, ಪು. ೫

೩. ಎಂ. ಭಾಗ್ಯಲಕ್ಷ್ಮಿ, ಬಳ್ಳಾರಿ ಪರಿಸರದ ಕನ್ನಡ - ತೆಲುಗು ದ್ವಿಭಾಷಿಕತೆ : ಸಮಾಜೋಭಾಷಿಕ ಅಧ್ಯಯನ (ಅಪ್ರಕಟಿತ, ಪಿಎಚ್.ಡಿ.ಪ್ರಬಂಧ) ೨೦೦೨, ಪು. ೧೯೭

೪. ಅದೇ, ಪು. ೧೯೮

# ೫

# ಭಾಷಿಕ ಸಂದರ್ಭಗಳು

೧. ಸಾಮಾಜಿಕ ಸಂದರ್ಭ

೨. ಸಾಂಸ್ಕೃತಿಕ ಸಂದರ್ಭ

೩. ಆರ್ಥಿಕ ಸಂದರ್ಭ

## ೨೫

# ಭಾಷಿಕ ಸಂದರ್ಭಗಳು

### ೧. ಸಾಮಾಜಿಕ ಸಂದರ್ಭ

ಭಾಷೆಯಿಲ್ಲದೆ ಸಮಾಜವಿಲ್ಲ, ಸಮಾಜವಿಲ್ಲದೆ ಭಾಷೆಯಿಲ್ಲ, ಸಮಾಜವಿಲ್ಲದೆ ಸಂಸ್ಕೃತಿಯಿಲ್ಲ ಎಂದು ಹೇಳಬಹುದು. ಭಾಷೆ, ಸಮಾಜ, ಸಂಸ್ಕೃತಿ ಒಂದಕ್ಕೊಂದು ಆಂತರಿಕ ಸಂಬಂಧವನ್ನು ಹೊಂದಿವೆ. ಸಮಾಜದಲ್ಲಿ ಒಂದು ಸಮುದಾಯದ ಭಾಷೆ ಇನ್ನೊಂದು ಸಮುದಾಯದ ಭಾಷೆಗಿಂತ ಭಿನ್ನವಾಗಿರುವುದನ್ನು ಗುರುತಿಸಬಹುದು. ಒಂದು ಸಮುದಾಯದವರು ತಮ್ಮ ಸಂಸ್ಕೃತಿ ಆಚರಣೆಗಳನ್ನು ಅವರದೇ ಆದ ರೀತಿಯಲ್ಲಿ ಭಾಷೆಯ ಮೂಲಕ ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದು.

ಯಾವುದೇ ಸಮುದಾಯದ ಸಂಸ್ಕೃತಿಯ ಅಧ್ಯಯನವೆಂದರೆ ಅದರ ಭಾಷೆಯನ್ನು ಸಂಪೂರ್ಣವಾಗಿ ಅರಿತುಕೊಳ್ಳಬೇಕಾಗುತ್ತದೆ. ಕಾರಣ ಸಾಂಸ್ಕೃತಿಕ ವಿವರಗಳು, ಆಚಾರ - ವಿಚಾರಗಳು, ರೂಢಿ ಸಂಪ್ರದಾಯಗಳು ಹಾಗೂ ಜೀವನ ಮೌಲ್ಯಗಳು ಆ ಜನಾಂಗದ ಭಾಷೆಯಲ್ಲಿ ಅಡಕಗೊಂಡಿರುತ್ತವೆ. ಭಾಷೆಯ ಮುಖಾಂತರವೇ ಅವುಗಳು ಪ್ರಕಟಗೊಳ್ಳುತ್ತವೆ. ಭಾಷೆ ಹಾಗೂ ಸಂಸ್ಕೃತಿಗಿರುವ ನಿಕಟ ಸಂಬಂಧವನ್ನು ಮೆಲನೊವಸ್ಕಿ, ರೂಥ್ ಬೆನೆಡಿಕ್ಟ್ ಮೊದಲಾದವರು ತಮ್ಮ ಬರಹಗಳಲ್ಲಿ ಸ್ಪಷ್ಟಪಡಿಸಿದ್ದಾರೆ. ಒಟ್ಟಿನಲ್ಲಿ ಭಾಷೆಯ ಮೂಲಕ ಆಯಾಭಾಷಿಕರ ಸಂಸ್ಕೃತಿಯ ಇತಿಹಾಸ ವಿಚಾರಧಾರೆ ಹಾಗೂ ಸ್ವರೂಪವನ್ನು ತಿಳಿದುಕೊಳ್ಳಬಹುದು. ಭಾಷೆಯು ಮಾನವನ ಎಲ್ಲಾ ಸಾಂಸ್ಕೃತಿಕ ಚಟುವಟಿಕೆಗಳ ಬುನಾದಿಯಾಗಿದೆ.

ಮೊಳಕಾಲ್ಮೂರು ಪ್ರದೇಶದಲ್ಲಿ ನೆಲೆಸಿರುವ ಮ್ಯಾಸನಾಯಕ ಸಮುದಾಯದವರ ಭಾಷೆಯು ಭಿನ್ನವಾಗಿದೆ. ಇವರು ದ್ವಿಭಾಷಿಕರು, ಸಮುದಾಯದ ಒಳ ಆವರಣದಲ್ಲಿ ತೆಲುಗುಭಾಷೆ ಬಳಕೆಯಾಗುತ್ತದೆ. ವ್ಯವಹಾರಿಕ ವಲಯದಲ್ಲಿ ಕನ್ನಡಭಾಷೆ ಬಳಕೆಯಾಗುತ್ತದೆ. ಪರಿಸರದ ಇತರೆ ಸಮುದಾಯದವರೊಂದಿಗೆ ಹೋಲಿಸಿದಾಗ ಇವರ ಭಾಷೆ ಭಿನ್ನತೆಯಿಂದ ಕೂಡಿದೆ. ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯ ಪ್ರಕಾರ ಸಮುದಾಯದ ಒಳಾವರಣದಲ್ಲಿ ತೆಲುಗುಭಾಷೆಯು ಬಳಕೆಯಾದರೂ ಸಹ ಸಂದರ್ಭಕ್ಕೆ ತಕ್ಕಂತೆ ಭಾಷೆಯನ್ನು ಆಯ್ದುಕೊಳ್ಳುವುದು ಕಂಡುಬರುತ್ತದೆ. ಈ ಪ್ರದೇಶದಲ್ಲಿ ಎಲ್ಲಾ ಜನಾಂಗದವರು ನೆಲೆಸಿರುವುದರಿಂದ ಅವರೊಂದಿಗೆ ವ್ಯವಹರಿಸುವ ಸಂದರ್ಭದಲ್ಲಿ ಕನ್ನಡವನ್ನು ಬಳಸುವುದು ಕಂಡುಬರುತ್ತದೆ. ಮಡಿವಾಳ, ಬಡಿಗ, ಕುಂಬಾರ, ಕಮ್ಮಾರ ಮುಂತಾದ ವೃತ್ತಿ ಮಾಡುವವರ ಹತ್ತಿರ ಮಾತನಾಡುವಾಗ ಕನ್ನಡ ಬಳಸುವ ಸಂದರ್ಭದಲ್ಲಿ ತೆಲುಗು ಪದಗಳು ನುಸುಳುವುದು ಕಂಡುಬರುತ್ತದೆ.

ಈ ಜನಾಂಗದಲ್ಲಿ ವಿದ್ಯಾವಂತರಾದವರು ಬೇರೆ ಸಮುದಾಯದವರೊಂದಿಗೆ ಮತ್ತು ವ್ಯವಹಾರಿಕ ವಲಯದಲ್ಲಿ ಕನ್ನಡವನ್ನು ಸ್ಪಷ್ಟವಾಗಿ ಬಳಸುತ್ತಾರೆ. ಅನಕ್ಷರಸ್ಥರಾದ ಹಳೆ ತಲೆಮಾರಿನವರು, ಕೃಷಿ ಕಾರ್ಮಿಕರು, ಮಹಿಳೆಯರು ಕನ್ನಡದ ಭಾಷಿಕ ಸಂದರ್ಭಗಳಿಗೆ ತೆರೆದುಕೊಂಡಾಗ ಭಾಷಾಮಿಶ್ರಣ ಪ್ರಕ್ರಿಯೆ ಉಂಟಾಗುತ್ತದೆ. ಕುಟುಂಬದ ವಲಯದಲ್ಲಿ ಮನೆಗೆ ಸಂಬಂಧಿಸಿದ ವಿಷಯಗಳನ್ನು ತೆಲುಗಿನಲ್ಲಿ ಮಾತನಾಡುವುದು ಮತ್ತು ವಿದ್ಯಾವಂತ ಮಕ್ಕಳು ತಮ್ಮ ಶಾಲಾ ಕಾಲೇಜಿಗೆ ಸಂಬಂಧಿಸಿದ ವಿಷಯಗಳನ್ನು ಕನ್ನಡದಲ್ಲಿ ಬಳಕೆ ಮಾಡುವುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. ಈ ಜನಾಂಗದವರು ಪರಿಸರದ ಇತರ ಸಮುದಾಯದವರೊಂದಿಗೆ ಜಗಳ ಮತ್ತು ಘರ್ಷಣೆಯಾದ ಸಂದರ್ಭದಲ್ಲಿ ಮೊದಲು ಕನ್ನಡವನ್ನು ಬಳಸುತ್ತಾರೆ. ಅತಿ ಉದ್ವೇಗ, ಕೋಪಬಂದಾಗ ತೆಲುಗು ಭಾಷೆಯನ್ನು ಬಳಸುವುದು ಕಂಡುಬರುತ್ತದೆ.

ಸಮಾಜದಲ್ಲಿ ಉನ್ನತವರ್ಗದವರಿಗೆ ಗೌರವಯುತವಾದ ಭಾಷೆಯನ್ನು ಬಳಸುತ್ತಾರೆ. ಗೌರವಸೂಚಕ ಪದಗಳು ಸಂಬಂಧವಾಚಕಗಳನ್ನು ಬಳಸುವುದು ಕಂಡುಬರುತ್ತದೆ. ಅಧಿಕಾರ ವರ್ಗದವರಿಗೆ, ಶ್ರೀಮಂತರಿಗೆ ಸರ್, ದಣಿ, ಗೋಂಚಿಕಾರ, ಸಾಹುಕಾರ, ಗೌಡ, ರೆಡ್ಡಿ ಎಂದು ಸಂಬೋಧಿಸುವುದು ತಿಳಿದುಬರುತ್ತದೆ. ಈ ಜನಾಂಗದಲ್ಲಿ ಮಹಿಳೆಯರು ಮತ್ತು ಹಳೆ ತಲೆಮಾರಿನವರನ್ನು ಅಪರಿಚಿತರು ಬಂದು ಮಾತನಾಡಿಸಿದಾಗ ಅವರು ತಮ್ಮ ಮಾತೃಭಾಷೆಯಲ್ಲಿ ಮಾತನಾಡುವುದು ತಿಳಿದುಬರುತ್ತದೆ.

### ೨. ಸಾಂಸ್ಕೃತಿಕ ಸಂದರ್ಭ

ಭಾಷೆಯು ಸಾಂಸ್ಕೃತಿಕ ಸಂದರ್ಭದಲ್ಲಿ ವಿಶೇಷವಾಗಿ ಬಳಕೆಯಾಗುತ್ತದೆ. ಸಮುದಾಯಗಳು ತಮ್ಮ ಸಂಸ್ಕೃತಿಯ ಸಂವಹನಕ್ಕಾಗಿ ತನ್ನದೇ ಆದ ಪರಿಭಾಷೆಯನ್ನು ಸೃಷ್ಟಿಸಿಕೊಳ್ಳುತ್ತಾ ಬಂದಿವೆ. ಭಾಷೆ ಮತ್ತು ಸಂಸ್ಕೃತಿಗೆ ನಿಕಟವಾದ ಸಂಬಂಧವಿರುವ ಹಾಗೆ ಅವರದೇ ಆದ ಅರ್ಥ ಪರಂಪರೆಯೂ ಇದೆ. ಆದ್ದರಿಂದ ಸಮುದಾಯಗಳು ಬಳಸುವ ಭಾಷೆಗಳ ಹಿಂದಿರುವ ಸಾಂಸ್ಕೃತಿಕ ಅರ್ಥಗಳ ಅರಿವು ಇಂದು ಅಧ್ಯಯನಗಳಿಗೆ ಅಗತ್ಯವಾಗಿದೆ. ಒಂದು ಭಾಷಿಕ ಸಮುದಾಯ ತನ್ನ ಪರಂಪರೆಯ ಸಂವಹನಕ್ಕಾಗಿ ಹೇಗೆ ಭಾಷೆಯನ್ನು

ಸಂಗೋಪಿಸಿಕೊಳ್ಳುತ್ತದೆ ಎಂಬುದೇ ಇಲ್ಲಿ ಮುಖ್ಯವಾಗುತ್ತದೆ. ಮ್ಯಾಸನಾಯಕರು ಸಹ ತಮ್ಮ ಸಾಂಸ್ಕೃತಿಕ ಸಂದರ್ಭದಲ್ಲಿ ತಮ್ಮ ಮಾತೃಭಾಷೆಯನ್ನು ಬಳಸುವುದು ಕ್ಷೇತ್ರಕಾರ್ಯದ ಮಾಹಿತಿಯ ಆಧಾರದ ಮೇಲೆ ಹೇಳಬಹುದು.

**ಮದುವೆ ಸಂದರ್ಭದಲ್ಲಿ**

ಈ ಜನಾಂಗದ ವಿವಾಹದ ಸಂದರ್ಭದಲ್ಲಿ ತಮ್ಮ ಮಾತೃಭಾಷೆಯನ್ನು ಬಳಸುವುದರೊಂದಿಗೆ ಇತ್ತೀಚೆಗೆ ಕನ್ನಡ ಭಾಷೆಯನ್ನು ಬಳಸುವುದು ಕಂಡುಬರುತ್ತದೆ. ನಾವು ಸೂಕ್ಷ್ಮವಾಗಿ ಗ್ರಹಿಸಿದಾಗ ನಿಶ್ಚಿತಾರ್ಥ, ಮುಹೂರ್ತ ಇನ್ನಿತರೆ ಮದುವೆಗೆ ಸಂಬಂಧಪಟ್ಟ ಕಾರ್ಯಕ್ರಮಗಳಲ್ಲಿ ತೆಲುಗುಭಾಷೆಯು ಬಳಕೆಯಾಗುತ್ತದೆ. ಇವರ ಮದುವೆಗಳಲ್ಲಿ ತಮ್ಮ ಸಮುದಾಯದವರು ಹೆಚ್ಚಾಗಿ ಭಾಗವಹಿಸುವುದರಿಂದ ಮತ್ತು ವೈವಾಹಿಕ ಸಂಬಂಧವನ್ನು ನಗರಪ್ರದೇಶಗಳಲ್ಲಿ ಬೆಳೆಸುವುದು ಬಹಳ ಅಪರೂಪ. ಹೆಚ್ಚಾಗಿ ತಮ್ಮ ನೆರೆಹೊರೆ ಹಟ್ಟಿಗಳಲ್ಲಿ ಸಂಬಂಧವನ್ನು ಬೆಳೆಸುವುದರಿಂದ ತಮ್ಮ ಮಾತೃಭಾಷೆಯನ್ನು ಬಳಸುವುದು ಕಂಡುಬರುತ್ತದೆ. ಇತ್ತೀಚಿಗೆ ಆಧುನಿಕತೆಯ ಶಿಕ್ಷಣ, ರಾಜಕೀಯ, ಆರ್ಥಿಕವಾಗಿ ಮುಂದುವರಿದಂತೆ, ಮದುವೆಗಳಲ್ಲಿ ಎಲ್ಲಾ ಸಮುದಾಯದವರು ಭಾಗವಹಿಸುತ್ತಾರೆ. ಅಂತಹ ಸಂದರ್ಭದಲ್ಲಿ ಕನ್ನಡ ಭಾಷೆಯನ್ನು ಬಳಕೆಮಾಡುವುದನ್ನು ಕಾಣಬಹುದು. ಊಟೋಪಚಾರ ಸಂದರ್ಭದಲ್ಲಿ ಎರಡು ಭಾಷೆಗಳು ಬಳಕೆಯಾಗುತ್ತವೆ. ಕೆಲವೊಂದು ಉದಾಹರಣೆಗಳ ಮೂಲಕ ಎರಡು ಭಾಷೆಗಳು ಒಂದಕ್ಕೊಂದು ಪ್ರಭಾವ ಬೀರಿರುವುದನ್ನು ಕಾಣಬಹುದು.

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಮ್ಯಾಸನಾಯಕರ ತೆಲುಗು |
|---|---|---|
| ನಿಶ್ಚಿತಾರ್ಥ | ಎಲೆ ಅಡಿಕೆ ಶಾಸ್ತ್ರ | ವಕ್ಕಾಕು ಶಾಸ್ತ್ರಮು |
| ಮದುಮಗ | ಮದ್ಲಿಂಗ | ಮದ್ಲಿಂಗಡು / ಪೆಂಡ್ಲಿಕೊಡುಕು |
| ಮದುಮಗಳು | ಮದ್ಲಿಗಿತ್ತಿ | ಮದ್ಲಿಗಿತ್ತಿ / ಪೆಂಡ್ಲಿಬಿಡ್ಡ |
| ಮಾಂಗಲ್ಯ | ತಾಳಿ | ತಾಳಿ |
| ಮುಹೂರ್ತ | ಮೂರ್ತ | ಮೂರ್ತಮು |
| ತೆಂಗಿನಕಾಯಿ | ಟೆಂಕಾಯಿ | ಟೆಂಕಾಯಿ |
| ಅಕ್ಷತೆ | ಅಕ್ಕಿಕಾಳು | ಬಿಲುಕಾಳು |
| ಬೂಮ | ಬೂಮು | ಬೂಮು |
| ಹಾಲು ಅನ್ನ | ಹಾಲು ಬಾನ | ಪಾಲು ಬುವ್ವ |

ಮ್ಯಾಸನಾಯಕರು ಕನ್ನಡ ಭಾಷೆಯ ಮೇಲೆ ತೆಲುಗು ಭಾಷೆಯ ಪ್ರಭಾವ ಬೀರಿರುವುದು ಅಪರೂಪ. ಆದರೆ, ಅವರ ಮಾತೃಭಾಷೆಯ ಮೇಲೆ ಕನ್ನಡದ ಭಾಷೆಯ ಪ್ರಭಾವ ಬೀರಿರುವುದನ್ನು ನಾವು ಕಾಣಬಹುದು. ಮದ್ಲಿಂಗಡು, ಮದ್ಲಿಗಿತ್ತಿ, ಬುವ್ವ ಮುಂತಾದ ಪದಗಳು ವಿಶಿಷ್ಟವಾಗಿ ಬಳಕೆಯಾಗುತ್ತವೆ.

**ಜಾತ್ರೆಗಳಲ್ಲಿ**

ವಿಶೇಷವಾಗಿ ಮ್ಯಾಸನಾಯಕರ ಭಾಷೆ ಜಾತ್ರೆಗಳಲ್ಲಿ, ಪರಿಸರದ ಇತರೆ ಸಮುದಾಯದವರ ಭಾಷೆಗಿಂತ ಭಿನ್ನವಾಗಿರುತ್ತದೆ. ಈ ಜನಾಂಗದವರು ತಮ್ಮದೇ ಆದ ಹಬ್ಬ ಆಚರಣೆಗಳನ್ನು ಹೊಂದಿದ್ದಾರೆ. ಇವರು ಬುಡಕಟ್ಟು ಜನಾಂಗವಾಗಿದ್ದರಿಂದ ಇವರ ದೈವಗಳು ಮತ್ತು ಹಬ್ಬಗಳು ಭಿನ್ನವಾಗಿ ಕಂಡುಬರುತ್ತವೆ. ನಗರಪ್ರದೇಶಗಳಲ್ಲಿ ವಾಸಿಸುವ ಬೇರೆ ಸಮುದಾಯದವರು, ಆಂಜನೇಯ, ಈಶ್ವರ, ಮಲ್ಲಯ್ಯ ಮುಂತಾದ ದೇವರುಗಳನ್ನು ಪೂಜಿಸಿದರೆ, ಇವರು ತಮ್ಮ ಜನಾಂಗದ ಸಾಂಸ್ಕೃತಿಕ ನಾಯಕರನ್ನೇ ಪೂಜೆಮಾಡುವುದನ್ನು ಕಾಣಬಹುದು. ಗಾದ್ರಿಪಾಲನಾಯಕ, ಪಾಪನಾಯಕ, ಓಬಳಸ್ವಾಮಿ ಮುಂತಾದ ದೇವರುಗಳನ್ನು ಪೂಜೆ ಮಾಡುತ್ತಾರೆ. ಇವರು ತಮ್ಮ ಹಬ್ಬಗಳಲ್ಲಿ ತಮ್ಮ ಮಾತೃಭಾಷೆಯನ್ನು ಬಳಸುತ್ತಾರೆ. ಜಾತ್ರೆಗಳಲ್ಲಿ ತಮ್ಮ ಪೆಟ್ಟಿಗೆ ದೇವರುಗಳನ್ನು 'ದೇವಗಂಪಲು' ಎಂದು ಕರೆಯುತ್ತಾರೆ. 'ಗಂಪಲು' ಎಂದರೆ ಪುಟ್ಟಿ ಎಂದರ್ಥ. ತಮ್ಮ ಜನಾಂಗಕ್ಕೆ ಸಂಬಂಧಪಟ್ಟ ಜಾತ್ರೆಯಾದರೆ ತಮ್ಮ ಜನಾಂಗದವರೆ ಹೆಚ್ಚಾಗಿ ಭಾಗವಹಿಸುವುದರಿಂದ ತೆಲುಗುಭಾಷೆಯ ಬಳಕೆ ಹೆಚ್ಚಾಗಿ ಕಂಡುಬರುತ್ತದೆ.

ದೇವಸ್ಥಾನದಲ್ಲಿ ಪೂಜಾರಿಯು ದ್ವಿಭಾಷಿಕನಾಗಿರುತ್ತಾನೆ. ದೇವಸ್ಥಾನಕ್ಕೆ ಬೇರೆ ಸಮುದಾಯದವರು ಬಂದಾಗ ಕನ್ನಡವನ್ನು ಬಳಸುತ್ತಾನೆ. ಮ್ಯಾಸನಾಯಕರು ಬಂದರೆ ತೆಲುಗು ಭಾಷೆಯನ್ನು ಬಳಸುತ್ತಾನೆ. ಕೆಲವೊಂದು ಉದಾಹರಣೆಗಳನ್ನು ಗಮನಿಸಿ.

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಮ್ಯಾಸನಾಯಕರ ತೆಲುಗು |
|---|---|---|
| ಉರುಮೆ | ಉರುಮೆ | ಉರುಮಲು |
| ಗರುಡಗಂಬ | ಗಲ್ಡಸ್ತಂಭ | ಗಲ್ಡಗಂಬ |
| ಶಂಖ | ಶಂಖ | ಶಂಖ |
| ಜಾಗಟೆ | ಜಾಗಟಿ | ಜಾಗಟಿ |
| ಹೂವು | ಹೂವು | ಪೂಲು |

ಜಾತ್ರೆಗಳಲ್ಲಿ ಇತ್ತೀಚೆಗೆ ಎಲ್ಲಾ ಸಮುದಾಯದವರು ಭಾಗವಹಿಸುತ್ತಾರೆ. ಅವರವರ ಸಮುದಾಯಕ್ಕೆ ತಕ್ಕಂತೆ ಭಾಷೆ ಬಳಕೆಯಾಗುತ್ತದೆ. ಮ್ಯಾಸನಾಯಕರ ಎಲ್ಲಾ ಜನಾಂಗದ ಜಾತ್ರೆಗಳಿಗೆ ಹೋದಾಗ ಅಲ್ಲಿನ ಭಾಷೆಯನ್ನು ಅನಿವಾರ್ಯವಾಗಿ ಬಳಸಬೇಕಾಗುತ್ತದೆ.

**ಬೇಟೆ ಸಂಸ್ಕೃತಿ**

ಇವರು ಬೇಟೆ ಸಂಸ್ಕೃತಿಯನ್ನು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ವಂಶಪರಂಪರಾನುಗತವಾಗಿ ಬೆಳೆಸಿಕೊಂಡು ಬಂದಿದ್ದಾರೆ. ಈಗಲೂ ಇವರಲ್ಲಿ ಬೇಟೆ ಸಂಸ್ಕೃತಿಗೆ ಸಂಬಂಧ ಪಟ್ಟಂತೆ ಆಯುಧಗಳಾದ ಭರ್ಜಿ, ಮಚ್ಚು, ಗಂಡುಗೊಡಲಿ, ಈಟಿ, ಕೋವಿ, ಚಿಪ್ಪುಗೊಡಲಿ, ಕತ್ತಿ, ಕೊಡಲಿ

ಮುಂತಾದ ಆಯುಧಗಳನ್ನು ಕಾಣಬಹುದು. ಇವರು ತಮ್ಮ ಮಾತೃಭಾಷೆಯಾದ ತೆಲುಗಿನಲ್ಲಿ ಸಂಬೋಧಿಸುವರು. ಮೊಲದಬೇಟೆ, ಹಂದಿಬೇಟೆ, ಮೀನುಬೇಟೆ ಮುಂತಾದ ಬೇಟೆಗಳನ್ನು ಇವರಲ್ಲಿ ಕಾಣಬಹುದು.

**ಆಚರಣೆಗಳಲ್ಲಿ**

ಮ್ಯಾಸನಾಯಕರು ತಮ್ಮ ಆಚರಣೆಗಳಾದ ಜನನ, ನಾಮಕರಣ, ಋತಿಮತಿ ಶಾಸ್ತ್ರ, ಶವಸಂಸ್ಕಾರ ಸಂದರ್ಭದಲ್ಲಿ ತಮ್ಮ ಮಾತೃಭಾಷೆಯಾದ ತೆಲುಗನ್ನು ಬಳಸುವುದು ಕಂಡುಬರುತ್ತದೆ. ಕೋಲಾಟ, ಭಜನೆ, ಬಯಲಾಟಗಳು ಇತ್ತೀಚಿಗೆ ಕನ್ನಡದಲ್ಲಿ ಪ್ರದರ್ಶನವಾಗುವುದನ್ನು ಕಾಣಬಹುದು.

**೩. ಆರ್ಥಿಕ ಸಂದರ್ಭದಲ್ಲಿ**

ಭಾಷೆಯು ಆರ್ಥಿಕ ವಲಯಗಳಲ್ಲಿ ಭಿನ್ನವಾಗಿ ಬಳಕೆಯಾಗುತ್ತದೆ. ಒಬ್ಬ ತೆಲುಗು ಮಾತೃಭಾಷೆಯ ವ್ಯಕ್ತಿ ಮಾರುಕಟ್ಟೆಗಳಲ್ಲಿ ಹೋದಾಗ ಅನಿವಾರ್ಯವಾಗಿ ಕನ್ನಡ ಭಾಷೆಗೆ ಪಲ್ಲಟಗೊಳ್ಳುತ್ತಾನೆ. ಏಕೆಂದರೆ ಇಲ್ಲಿನ ಪ್ರಾದೇಶಿಕ ಭಾಷೆ ಕನ್ನಡವಾಗಿರುವುದರಿಂದ ಮ್ಯಾಸನಾಯಕ ಜನಾಂಗದವರು ಅನಿವಾರ್ಯವಾಗಿ ವ್ಯವಹಾರಿಕ ಸಂದರ್ಭದಲ್ಲಿ ಕನ್ನಡವನ್ನು ಬಳಸುತ್ತಾರೆ. ಸಾಮಾನ್ಯವಾಗಿ ಪುರುಷರು ವ್ಯವಹಾರಿಕ ಸಂದರ್ಭಗಳನ್ನು ನಿರ್ವಹಿಸುವದರಿಂದ ಎರಡು ಭಾಷೆಗಳನ್ನು ಪ್ರಯೋಗ ಮಾಡುತ್ತಾರೆ. ಆದರೆ ಮಹಿಳೆಯರು ಹೆಚ್ಚಾಗಿ ಅನಕ್ಷರಸ್ಥರು. ಕುಟುಂಬೇತರ ವ್ಯವಹಾರಿಕ ಬಳಕೆ ಕಡಿಮೆ ಇರುವುದರಿಂದ ಇವರು ಹೆಚ್ಚಾಗಿ ತೆಲುಗು ಭಾಷೆಯನ್ನು ಬಳಸುತ್ತಾರೆ. ಪ್ರಾದೇಶಿಕ, ರಾಜಕೀಯ, ಶಿಕ್ಷಣ, ಆರ್ಥಿಕ ಕಾರಣಗಳಿಂದ ಕನ್ನಡದ ಪ್ರಭಾವ ಕಂಡುಬಂದರೂ ಸಹ ಮಹಿಳೆಯರಲ್ಲಿ ಕನ್ನಡಭಾಷೆಯ ಗ್ರಹಿಕೆಯ ಜ್ಞಾನವಿರುತ್ತದೆ. ಆದರೆ ಅಭಿವ್ಯಕ್ತಪಡಿಸುವ ಸಂದರ್ಭದಲ್ಲಿ ತೆಲುಗು ಉಚ್ಚಾರಣಾ ಧ್ವನಿನಿಯಮವನ್ನು ಕಾಣಬಹುದು. ಅನಕ್ಷರಸ್ಥ ಮಹಿಳೆಯರು ಮತ್ತು ಹಳೆ ತಲೆಮಾರಿನವರನ್ನು ಅರೆ ದ್ವಿಭಾಷಿಕರೆಂದು ಕರೆಯಬಹುದು. ಕೆಲವು ತೀರ ಹಿಂದುಳಿದ ಪ್ರದೇಶಗಳಲ್ಲಿ ತೆಲುಗುಭಾಷೆಯ ಪರಿಚಯ ಹೆಚ್ಚಾಗಿ ಇರುತ್ತದೆ. ಕನ್ನಡಭಾಷೆಯ ಪರಿಚಯ ಶಾಲಾ ಮಾಧ್ಯಮಗಳ ಮೂಲಕ ಪರಿಚಯವಾಗುತ್ತದೆ.

ಮ್ಯಾಸನಾಯಕರು ಕೌಟುಂಬಿಕ ವಲಯದಲ್ಲಿ ತೆಲುಗು ಭಾಷೆಯನ್ನು ಬಳಕೆ ಮಾಡಿದರೂ ವ್ಯವಹಾರಿಕ ವಲಯಗಳಿಗೆ ಹೋದಾಗ ಕನ್ನಡ ಬಳಸುವುದು ಅನಿವಾರ್ಯ. ಸಂತೆ, ಮಾರುಕಟ್ಟೆ, ಶಾಲಾ ಕಾಲೇಜುಗಳು, ವ್ಯವಸಾಯಕ್ಕೆ ಬೇಕಾದ ಗೊಬ್ಬರ, ಔಷಧ, ಬೀಜಗಳನ್ನು ಮತ್ತು ಬೇಕಾದ ದಿನನಿತ್ಯದ ಸಲಕರಣೆಗಳನ್ನು ಖರೀದಿಸುವ ಸಂದರ್ಭದಲ್ಲಿ ಕನ್ನಡವನ್ನು ವ್ಯವಹಾರಿಕವಾಗಿ ಬಳಸುತ್ತಾರೆ. ಕೂಲಿ ಕಾರ್ಮಿಕರ ಜೊತೆ ಹಣದ ವ್ಯವಹಾರ ಮಾಡುವ ಸಂದರ್ಭದಲ್ಲಿ ಮಾತೃಭಾಷೆಯನ್ನು ಬಳಸಿದರೂ ಸಹ ಕನ್ನಡದ ಸಂಖ್ಯಾವಾಚಕಗಳಾದ ನೂರು, ಸಾವಿರ ಮತ್ತು ಬಡ್ಡಿ ಅಸಲು ಮುಂತಾದ ಪದಗಳು ಕನ್ನಡದಲ್ಲಿ ಬಳಕೆಯಾಗುತ್ತವೆ. ಇವರು ಆರ್ಥಿಕವಾಗಿ ತೀರ ಹಿಂದುಳಿದಿದ್ದಾರೆ. ಆಸ್ತಿಪಾಸ್ತಿಗಳು ಇರುವುದು ಬಹಳ ಕಡಿಮೆ. ಕೂಲಿಯು ಇವರ ಮುಖ್ಯ

ವೃತ್ತಿಯಾಗಿ ಕಂಡುಬರುತ್ತದೆ. ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯ ಪ್ರಕಾರ ಇವರ ದುಡಿಮೆಯ ಪ್ರತಿಫಲಕ್ಕೆ ಆಹಾರ ದವಸ ಧಾನ್ಯಗಳಾದ ಜೋಳ, ನೆಲ್ಲು, ರಾಗಿ, ಸಜ್ಜೆ ಇತ್ಯಾದಿಗಳನ್ನು ಪಡೆಯುವುದು ಗಮನಾರ್ಹವಾದ ಅಂಶವಾಗಿ ಕಂಡುಬರುತ್ತದೆ. ವ್ಯವಹಾರಿಕ ಸಂದರ್ಭದಲ್ಲಿ ದವಸ ಧಾನ್ಯಗಳನ್ನು ಅಳತೆಮಾಡುವ ಸಂದರ್ಭದಲ್ಲಿ ಸಂಖ್ಯಾವಾಚಕಗಳನ್ನು ಬಳಸುತ್ತಾರೆ. ಚಟಾಕು, ಅರಪಾವು, ಪಾವು, ಅಚ್ಚೇರು, ಸೇರು ಎಂದು ಅಳತೆಮಾಡುವ ಪರಿಮಾಣ ವಾಚಕಗಳನ್ನು ಬಳಸುತ್ತಾರೆ. ಇವರಿಗೆ ಇನ್ನೂ 'ಲೀಟರ್' ಪರಿಚಯ ಬಹಳ ಕಡಿಮೆಯಿದೆ.

ಈ ಪ್ರದೇಶವು ಕರ್ನಾಟಕ ಗಡಿಪ್ರದೇಶವಾಗಿರುವದರಿಂದ ಸಾಮಾನ್ಯವಾಗಿ ಎಲ್ಲಾ ಸಮುದಾಯದವರಿಗೆ ತೆಲುಗು ಭಾಷೆಯ ಪರಿಚಯವಿರುತ್ತದೆ. ಆದರೆ ಅವರು ಕೆಲವೊಂದು ಸಂದರ್ಭದಲ್ಲಿ ಮಾತ್ರ ತೆಲುಗು ಭಾಷೆಯನ್ನು ಬಳಸುತ್ತಾರೆ. ಮ್ಯಾಸನಾಯಕರು ಎರಡು ಭಾಷೆಗಳನ್ನು ಬಳಸುವುದು ಕಂಡುಬರುತ್ತದೆ. ಮೊಳಕಾಲ್ಮೂರು ಪ್ರದೇಶದಲ್ಲಿ ತೆಲುಗು ಸಿನಿಮಾಗಳ ಪ್ರಭಾವ ಹೆಚ್ಚಾಗಿ ಕಂಡುಬರುತ್ತದೆ. ಪ್ರಾದೇಶಿಕವಾಗಿ ಕನ್ನಡವನ್ನು ಬಳಸಿದರೂ ಸಹ ಹೆಚ್ಚಾಗಿ ತೆಲುಗು ಭಾಷೆಗೆ ಮಹತ್ವ ನೀಡುತ್ತಾರೆ. ಸಿನಿಮಾ ಮಂದಿರದಲ್ಲಿ ಟಿಕೇಟ್ ಪಡೆಯುವ ಸಂದರ್ಭದಲ್ಲಿ ಕನ್ನಡ ಭಾಷೆಯನ್ನು ಮಾತನಾಡುತ್ತಾರೆ. ಸಿನಿಮಾ ನೋಡುವುದು ತೆಲುಗಿನಲ್ಲಿ ಕರ್ನಾಟಕದ ಗಡಿಭಾಗದ ಆಂಧ್ರಪ್ರದೇಶದಲ್ಲಿ ಕನ್ನಡ ಚಿತ್ರಗಳು ಪ್ರದರ್ಶನವಾಗುವುದನ್ನು ಕಾಣಬಹುದು.

ಮ್ಯಾಸನಾಯಕರು ಬುಡಕಟ್ಟು ಜನಾಂಗದವರಾಗಿದ್ದರೂ ಸಹ ಇವರ ಭಾಷೆಯಲ್ಲಿ ಅನ್ಯದೇಶ್ಯ ಪದಗಳನ್ನು ದಟ್ಟವಾಗಿ ಕಾಣಬಹುದು. ಮಾರ್ಕೆಟ್, ಬುಕ್, ಟೇಬಲ್, ಮಟನ್, ಕರೆಂಟ್, ಟಿ.ವಿ, ಬಸ್, ಅರ್ಜೆಂಟ್, ಪೆನ್, ಆಫೀಸ್, ಡ್ಯೂಟಿ, ಬಾಕ್ಸ್, ಫೋನ್ ಇತ್ಯಾದಿ ಪದಗಳು ಸಾಮಾನ್ಯವಾಗಿ ಎಲ್ಲಾ ಭಾಷಿಕರು ಸ್ವೀಕರಣ ಮಾಡಿರುವುದು ಕಂಡುಬರುತ್ತದೆ. ತಮ್ಮ ಮನೆ, ಆಸ್ತಿಗೆ ಸಂಬಂಧಿಸಿದ ವಿವರಗಳನ್ನು ಹೇಳುವ ಸಂದರ್ಭದಲ್ಲಿ ಪಟ್ಟಾ, ಪಾಣಿ, ಖಾತೆ, ಸರ್ವೆನಂಬರ್, ಅಪ್ಲಿಕೇಶನ್, ಫಾರ್ಮ್, ನೋಟಿಸ್, ಕಂದಾಯ ಮುಂತಾದ ಪದಗಳನ್ನು ಬಳಸುತ್ತಾರೆ.

❖❖

# ೬

# ಸಮಾರೋಪ

ಮೊಳಕಾಲ್ಮೂರು ತಾಲೂಕಿನ ಭಾಷಿಕ ಪರಿಸರ ತುಂಬಾ ವಿಶಿಷ್ಟವಾಗಿದೆ. ಈ ಪ್ರದೇಶವು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಗಡಿರೇಖೆಯಲ್ಲಿದೆ. ನೆರೆ ರಾಜ್ಯವಾದ ಆಂಧ್ರಪ್ರದೇಶದ ಗಡಿಭಾಗದ ಮೇರೆಯನ್ನು ಹೊಂದಿದೆ. ಆದ್ದರಿಂದ ಈ ಪ್ರದೇಶದಲ್ಲಿ ತೆಲುಗು ಮತ್ತು ಕನ್ನಡಭಾಷೆಗಳು ಬಳಕೆಯಾಗಿ ದ್ವಿಭಾಷಿಕ ಪರಿಸರ ಉಂಟಾಗಿರುವುದು ಕಂಡುಬರುತ್ತದೆ. ಈ ಪರಿಸರದಲ್ಲಿ ಅತಿಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿರುವ ಮ್ಯಾಸನಾಯಕರ ಭಾಷೆಯು ವಿಶಿಷ್ಟವಾಗಿದೆ. ಇತರೆ ಸಮುದಾಯದವರಲ್ಲಿ ಕೌಟುಂಬಿಕ ಮತ್ತು ವ್ಯವಹಾರಿಕ ವಲಯಗಳಲ್ಲಿ ಕನ್ನಡ ಭಾಷೆಯನ್ನು ಬಳಸುತ್ತಾರೆ. ಆದರೆ ಮ್ಯಾಸನಾಯಕರ ಭಾಷೆ ಕೌಟುಂಬಿಕ ಮತ್ತು ವ್ಯವಹಾರಿಕ ವಲಯಗಳಲ್ಲಿ ಭಿನ್ನವಾಗಿ ಬಳಕೆಯಾಗುತ್ತದೆ. ಮ್ಯಾಸನಾಯಕರು ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯ ಸಂದರ್ಭದಲ್ಲಿ ಆಂಧ್ರಮೂಲದಿಂದ ವಲಸೆ ಬಂದಂತಹ ಬುಡಕಟ್ಟು ಸಮುದಾಯವಾಗಿದೆ. ಆದ್ದರಿಂದ ಆಪ್ತವಲಯಗಳಲ್ಲಿ ತೆಲುಗು ಮತ್ತು ವ್ಯವಹಾರಿಕ ವಲಯಗಳಲ್ಲಿ ಪರಿಸರದ ಭಾಷೆ ಕನ್ನಡ ಬಳಕೆಯಾಗುತ್ತಿರುವುದು ತಿಳಿದುಬರುತ್ತದೆ.

ಪ್ರಸ್ತುತ ಸಂಪ್ರಬಂಧದಲ್ಲಿ ಮ್ಯಾಸನಾಯಕರ ಕೌಟುಂಬಿಕ ಮತ್ತು ವ್ಯವಹಾರಿಕ ವಲಯಗಳಲ್ಲಿ ಬಳಕೆಯಾಗುವ ತೆಲುಗು ಮತ್ತು ಕನ್ನಡ ಭಾಷೆಗಳ ಸ್ವರೂಪವನ್ನು ವಿಶ್ಲೇಷಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶಗಳಲ್ಲೊಂದಾಗಿದೆ. ಕೌಟುಂಬಿಕ ವಲಯದ ಸಂಬಂಧವಾಚಕಗಳು ಮತ್ತು ಸಂಬೋಧನಾರೂಪಗಳು ತೆಲುಗು ಭಾಷೆಯಲ್ಲಿ ಬಳಕೆಯಾದರೂ ಸಹ ಕೆಲವೊಂದು ಕನ್ನಡದ ರೂಪಗಳು ಬಳಕೆಯಾಗುತ್ತವೆ. ಉದಾ: 'ತಾಯಿ' ಎಂಬ ಸಂಬಂಧಸೂಚಕಕ್ಕೆ 'ಅವ್ವ' ಎಂದು ಸಂಬೋಧನೆ ಮಾಡುತ್ತಾರೆ.

ಮತ್ತು 'ಅಜ್ಜಿಗೆ' 'ಅಬ್ಬ' ಎಂದು ಸಂಬೋಧಿಸುತ್ತಾರೆ. ಈ ಸಂಬಂಧವಾಚಕಗಳು ಮೂಲತ: ಕನ್ನಡ ಪದಗಳಾದರು ಸಹ ಪರಿಸರದ ಇತರೆ ಸಮುದಾಯದವರು ಕನ್ನಡ ಭಾಷೆಯಲ್ಲಿ ಈ ಪದಗಳನ್ನು ಬಳಸುವುದಿಲ್ಲ. ಆದರೂ ಮ್ಯಾಸನಾಯಕರ ಆಡುಮಾತಿನಲ್ಲಿ ಇವು ಬಳಕೆಯಾಗುವದು ಕಂಡುಬರುತ್ತದೆ. ಜೊತೆಗೆ ಈ ಸಮುದಾಯದವರು ಶಾಲಾ ಕಾಲೇಜು, ಮಾರುಕಟ್ಟೆ, ಆಸ್ಪತ್ರೆ, ಹೋಟೆಲುಗಳಲ್ಲಿ ವ್ಯವಹರಿಸುವ ಸಂದರ್ಭದಲ್ಲಿ ಕನ್ನಡವನ್ನು ಹೆಚ್ಚಾಗಿ ಬಳಸುವುದು ಕಂಡುಬರುತ್ತದೆ.

ಒಂದು ಸಮುದಾಯದವರು ತಮ್ಮ ಮೂಲಭಾಷೆಯನ್ನು ವಂಶಪರಂಪರೆಯಾಗಿ ತಮ್ಮ ಸಂಸ್ಕೃತಿಯೊಂದಿಗೆ ಉಳಿಸಿಕೊಂಡು ಬರುವುದು ಒಂದೆಡೆಯಾದರೆ ಮತ್ತೊಂದು ಕಡೆ ತಾವು ಬದುಕುತ್ತಿರುವ ಪ್ರಾದೇಶಿಕ ಭಾಷೆಯನ್ನು ರಾಜಕೀಯ, ಆರ್ಥಿಕ, ಶೈಕ್ಷಣಿಕ, ಸಾಮಾಜಿಕ ಕಾರಣಗಳಿಂದ ಕಲಿಯುವ ಅನಿವಾರ್ಯತೆ ಇರುತ್ತದೆ. ಇಂತಹ ಸಂದರ್ಭದಲ್ಲಿ ಭಾಷಾ ಸಮುದಾಯದವರು, ದ್ವಿಭಾಷಿಕರಾಗುವ ಸಂಭವ ಹೆಚ್ಚಾಗಿ ಕಂಡುಬರುತ್ತದೆ. ತಮ್ಮ ಮಾತೃಭಾಷೆ ಕೆಲವು ಸೀಮಿತ ಆವರಣದಲ್ಲಿ ಬಳಸಿ ಉಳಿದಂತೆ ಪರಿಸರದ ಭಾಷೆಗೆ ಪಲ್ಲಟಗೊಳ್ಳುತ್ತಾರೆ. ಇದರಿಂದ ಎರಡೂ ಭಾಷೆಗಳ ನಡುವೆ ಕೊಡುಕೊಳೆಯೂ ನಡೆಯುತ್ತಿರುತ್ತದೆ. ಇಂತಹ ಲಕ್ಷಣವನ್ನು ಮೊಳಕಾಲ್ಮೂರು ಪ್ರದೇಶದಲ್ಲಿ ನೆಲೆಗೊಂಡಿರುವ ಮ್ಯಾಸನಾಯಕರಲ್ಲಿ ಕಾಣಬಹುದು. ಮ್ಯಾಸನಾಯಕರು ದ್ವಿಭಾಷಿಕರಾಗಿರುವುದರಿಂದ ಕನ್ನಡ ಭಾಷೆಯ ಮೇಲೆ ಅವರ ಮನೆಮಾತಾದ ತೆಲುಗಿನ ಪ್ರಭಾವವನ್ನು ಕಾಣಬಹುದು. ಅವರ ಮಾತೃಭಾಷೆ ತೆಲುಗು ಆಗಿರುವದರಿಂದ ಅವಿದ್ಯಾವಂತ ಕೃಷಿಕಾರ್ಮಿಕರು ಮತ್ತು ಮಹಿಳೆಯರಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ತೆಲುಗಿನ ಮೇಲೆ ಕನ್ನಡದ ಪ್ರಭಾವವನ್ನು ಪ್ರಾದೇಶಿಕ, ಶೈಕ್ಷಣಿಕ, ರಾಜಕೀಯ ಅನಿವಾರ್ಯತೆ ಕಾರಣಗಳಿಂದ ಕನ್ನಡದ ಪ್ರಭಾವ ಬೀರಿರುವುದು ಕಂಡುಬರುತ್ತದೆ.

ಪ್ರಸ್ತುತ ಕನ್ನಡ ಭಾಷೆಯ ಪರವಾಗಿ ಕರ್ನಾಟಕ ಸರ್ಕಾರದ ಆಡಳಿತ್ಮಾಕ ನಿರ್ಧಾರಗಳಿಂದಾಗಿ ಸಾಮಾಜಿಕವಾಗಿ ಮ್ಯಾಸನಾಯಕರು ತೆಲುಗುಭಾಷೆಯಿಂದ ಕನ್ನಡಕ್ಕೆ ಪಲ್ಲಟಗೊಳ್ಳುವುದು ಕಂಡುಬರುತ್ತದೆ. ಈ ಸಮುದಾಯದವರ ಮಾತೃಭಾಷೆಯು ತೆಲುಗು ಇದ್ದರೂ ಸಹ ತಾವು ಶಿಕ್ಷಣ ಪಡೆಯುವುದು ಕನ್ನಡದಲ್ಲಿ ಆದ್ದರಿಂದ ಶೈಕ್ಷಣಿಕ ಪ್ರಭಾವದಿಂದ ಪಲ್ಲಟವಾಗುವುದನ್ನು ಗುರ್ತಿಸಬಹುದು. ಸಾಮಾಜಿಕ ಸಂದರ್ಭಗಳಿಗೆ ತೆರೆದುಕೊಳ್ಳುವ ಸಂದರ್ಭದಲ್ಲಿ ಕನ್ನಡದಲ್ಲಿ ಮತ್ತು ತೆಲುಗಿನಲ್ಲಿ ನುಡಿಮಿಶ್ರಣ ಪ್ರಕ್ರಿಯೆ ನಡೆಯುತ್ತದೆ. ವ್ಯಾಪರ ಸಂದರ್ಭದಲ್ಲಿ ಮತ್ತು ಶೈಕ್ಷಣಿಕ ಸನ್ನಿವೇಶಗಳಲ್ಲಿ ನುಡಿಜಿಗಿತದ ಪ್ರಕ್ರಿಯೆ ಕಂಡುಬರುತ್ತದೆ. ಇಂತಹ ಪ್ರಕ್ರಿಯೆಗಳು ಹಳೆ ತಲೆಮಾರಿನವರಲ್ಲಿ, ಅನಕ್ಷರಸ್ಥ ಮಹಿಳೆಯರಲ್ಲಿ ಹೆಚ್ಚಾಗಿ ಕಂಡುಬರುತ್ತವೆ.

ಮ್ಯಾಸನಾಯಕರು ತಮ್ಮ ಮಾತೃಭಾಷೆಯನ್ನು ಕೌಟುಂಬಿಕ ಆವರಣಗಳಾದ ಮನೆ, ಸಂಬಂಧಿಕರಲ್ಲಿ, ಸ್ನೇಹಿತರಲ್ಲಿ ಮತ್ತು ಆಚರಣೆಗಳಲ್ಲಿ ಸಂಗೋಪನೆ ಮಾಡಿಕೊಳ್ಳುತ್ತಾರೆ. ಆದರೆ ಶಾಲಾ ಕಾಲೇಜುಗಳಲ್ಲಿ, ಮಾರುಕಟ್ಟೆಗಳಲ್ಲಿ ಕನ್ನಡ ಭಾಷೆಯನ್ನು ಆಯ್ದುಕೊಳ್ಳುತ್ತಾರೆ. ಹೊಸ ತಲೆಮಾರಿನ ಯುವಪೀಳಿಗೆಯವರು ವಿದ್ಯಾವಂತರು ತಮ್ಮ ಆಪ್ತವಲಯಗಳಲ್ಲಿ ತೆಲುಗು ಭಾಷೆಯನ್ನು ಉಳಿಸಿಕೊಂಡು, ವ್ಯವಹಾರಿಕ ವಲಯಗಳಲ್ಲಿ ಕನ್ನಡವನ್ನು ಬಳಸುತ್ತಾರೆ. ಹಳೆ ತಲೆಮಾರಿನ ವೃದ್ಧರು ಮತ್ತು ಅನಕ್ಷರಸ್ಥ ಮಹಿಳೆಯರು ತಮ್ಮ ಆಪ್ತವಲಯಗಳೊಂದಿಗೆ ವ್ಯವಹಾರಿಕ ವಲಯಗಳಲ್ಲಿ ತೆಲುಗುಭಾಷೆಯನ್ನು ಸಂಗೋಪನೆ ಮಾಡುವದು ಕಂಡುಬರುತ್ತದೆ.

ಮ್ಯಾಸನಾಯಕರು ದ್ವಿಭಾಷಿಕರಾಗಿರುವದರಿಂದ ಎರಡು ಭಾಷೆಗಳ ಬಗ್ಗೆ ಒಳ್ಳೆಯ ಮನೋಭಾವವನ್ನು ಹೊಂದಿದ್ದಾರೆ. ಮಾತೃಭಾಷೆಯಾದ ತೆಲುಗಿನಿಂದ ಮಾತನಾಡುವ ವ್ಯಕ್ತಿಯನ್ನು ಕಂಡಾಗ ಇವರು ನಮ್ಮ ಸಮುದಾಯದವರೆಂದು ತಿಳಿದು ಪರಿಚಯ ಮಾಡಿಕೊಂಡು ವಿಶ್ವಾಸವನ್ನು ಬೆಳೆಸುತ್ತಾರೆ. ಭಾಷೆಯು ವಾಸ್ತವ ಸ್ಥಿತಿಗತಿಯಲ್ಲಿ ತೀವ್ರವಾಗಿ ಬೆಳೆಯುತ್ತಿರುವದರಿಂದ ಆಧುನಿಕ ಪ್ರಪಂಚದಲ್ಲಿ ದ್ವಿಭಾಷೆಗಳು ಯಾವ ರೀತಿಯಲ್ಲಿ ಬಳಕೆಯಾಗುತ್ತವೆ ಎಂಬುವುದು ಭಾಷಿಕ ಸಂದರ್ಭಗಳಿಂದ ತಿಳಿದುಬರುತ್ತದೆ. ಮ್ಯಾಸನಾಯಕರು ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ವಲಯಗಳಲ್ಲಿ ಸಂದರ್ಭಕ್ಕೆ ತಕ್ಕಂತೆ ಭಾಷೆಯನ್ನು ಆಯ್ದುಕೊಳ್ಳುತ್ತಾರೆ. ಸಾಮಾಜಿಕ ವಲಯಗಳಲ್ಲಿ ಮ್ಯಾಸನಾಯಕರು ಇತರೆ ಜನಾಂಗ ಸಮುದಾಯದವರೊಂದಿಗೆ ವ್ಯವಹರಿಸುವ ಸಂದರ್ಭದಲ್ಲಿ ಕನ್ನಡವನ್ನು ಬಳಸುತ್ತಾರೆ. ಸಾಂಸ್ಕೃತಿಕ ವಲಯಗಳಲ್ಲಿ ಮದುವೆ, ಜಾತ್ರೆ, ನಾಮಕರಣ, ಬೇಟೆ, ಸಂಸ್ಕೃತಿ ಮುಂತಾದ ವಲಯಗಳಲ್ಲಿ ತೆಲುಗುಭಾಷೆಯನ್ನು ಹೆಚ್ಚಾಗಿ ಬಳಸುತ್ತಾರೆ. ಇತ್ತೀಚೆಗೆ ಕನ್ನಡ ಭಾಷೆಯನ್ನು ಬಳಸುವುದು ಕಂಡುಬರುತ್ತದೆ. ಆರ್ಥಿಕವಲಯಗಳಲ್ಲಿ ತೆಲುಗು ಮತ್ತು ಕನ್ನಡ ಎರಡನ್ನು ಬಳಸಿ ಹೆಚ್ಚಾಗಿ ಕನ್ನಡವನ್ನು ಬಳಸುತ್ತಾರೆ. ಇದನ್ನೆಲ್ಲ ಈ ಪ್ರಬಂಧದಲ್ಲಿ ವಿವರಿಸಲಾಗಿದೆ.

ಕ್ಷೇತ್ರಕಾರ್ಯವನ್ನು ಮಾಡಿ ಸಂಗ್ರಹಿಸಿದ ಮಾಹಿತಿಯನ್ನು ಕ್ರಮವಾಗಿ ಅನುಬಂಧದಲ್ಲಿ ನೀಡಲಾಗಿದೆ. ಮ್ಯಾಸನಾಯಕರು ಮೊಳಕಾಲ್ಮೂರು ಪ್ರದೇಶದಲ್ಲಿ ಹಲವಾರು ಶತಮಾನಗಳ ಕಾಲ ನೆಲೆಸಿದ್ದರೂ ಸಹ ತಮ್ಮ ಬೆಡಗು ಮತ್ತು ದೈವಕ್ಕೆ ಸಂಬಂಧಿಸಿದ ಪದಗಳನ್ನು ತೆಲುಗಿನಲ್ಲಿ ಸಂಗೋಪನೆ ಮಾಡುವದನ್ನು ಕಾಣಬಹುದಾಗಿದೆ. ಇವರ ಬೆಡಗು (ಗೋತ್ರ) ಮತ್ತು ದೈವಕ್ಕೆ ಸಂಬಂಧಿಸಿದ ಪದಗಳನ್ನು ಅನುಬಂಧದಲ್ಲಿ ನೀಡಲಾಗಿದೆ. ಈ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಂಡಿರುವ ಗ್ರಂಥಗಳನ್ನು ಕೊನೆಯ ಹಂತದಲ್ಲಿ ನೀಡಲಾಗಿದೆ.

ಮ್ಯಾಸನಾಯಕರು ಬಳಸುವ ಭಾಷೆಯು ತುಂಬಾ ವಿಶಿಷ್ಟವಾದ ಲಕ್ಷಣವನ್ನು ಹೊಂದಿದೆ. ದ್ವಿಭಾಷಿಕರಾದರೂ ಇವರ ಮಾತೃಭಾಷೆ ಸಿಂಹಪಾಲು ಕನ್ನಡ ಭಾಷೆಯಿಂದ ಮಿಶ್ರಿತಗೊಂಡು 'ಕಂದೆಲುಗು' ಭಾಷೆಯಾಗಿ ಬಳಕೆಯಾಗುತ್ತದೆ. ಇಂತಹ ಬುಡಕಟ್ಟು ಸಮುದಾಯಗಳ ಭಾಷೆಗಳು ತೀವ್ರಗತಿಯಲ್ಲಿ ಬೆಳೆಯುತ್ತಿರುವ ಜಾಗತೀಕರಣ, ಉದಾರಿಕರಣ, ಖಾಸಗಿಕರಣಗಳ ಪ್ರಭಾವದಿಂದ ಅಳಿಸಿಹೋಗುವ ಹಾದಿಯಲ್ಲಿವೆ. ಹೊಸ ನಾಗರೀಕರಣ ಸಂಸ್ಕೃತಿಯ ಅಲೆಗೆ ಸಿಕ್ಕು ಎಷ್ಟೋ ಬುಡಕಟ್ಟು ಭಾಷೆಗಳು ತಮ್ಮ ಆಡುನುಡಿ ಕೋಶದಿಂದ ಕಣ್ಮರೆಯಾಗಿವೆ. ಇನ್ನೂ ಕೆಲಭಾಷೆಗಳ ಕಣ್ಮರೆಯಾಗುವ ಹಂತದಲ್ಲಿವೆ. ಇಂತಹ ಬುಡಕಟ್ಟು ಸಮುದಾಯಗಳ ಭಾಷೆ ಮತ್ತು ಸಂಸ್ಕೃತಿಯನ್ನು ಅಧ್ಯಯನ ಮಾಡುವುದು ಭಾಷಾ ವಿಜ್ಞಾನಿಗಳ, ಭಾಷಾಸಕ್ತರ, ವಿದ್ವಾಂಸರ ಸಂಶೋಧಕರ ಜವಾಬ್ದಾರಿಯಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಮ್ಯಾಸನಾಯಕರ ಭಾಷೆಯ ಸ್ವರೂಪವನ್ನು ತಿಳಿಯಲು ಪ್ರಯತ್ನಿಸಲಾಗಿದೆ. ಸಂಬಂಧವಾಚಕಗಳು ಸಂಬೋಧನಾರೂಪಗಳು ಶಾಲಾ ಕಾಲೇಜುಗಳಲ್ಲಿ, ಮಾರುಕಟ್ಟೆಗಳಲ್ಲಿನ ಭಾಷಾ ಬಳಕೆಯನ್ನು ಮತ್ತು ನುಡಿಜಗಿತ, ನುಡಿಬೆರಕೆ ಪ್ರಕ್ರಿಯಗಳನ್ನು ವಿಶ್ಲೇಷಿಸಲಾಗಿದೆ. ಮುಂದೆ ಮ್ಯಾಸನಾಯಕರ ಭಾಷೆಯ ಸಮಗ್ರ ಅಧ್ಯಯನಕ್ಕೆ ಈ ಸಂಪ್ರಬಂಧ ಪೂರಕವಾಗಬಲ್ಲದು ಎನ್ನುವ ಆಶಯ. ಇಂತಹ ದ್ವಿಭಾಷ ಸಮುದಾಯಗಳ ಸಮಗ್ರ ಅಧ್ಯಯನಕ್ಕೆ ನೇರವಾಗಬಲ್ಲದೆಂದು ಭಾವಿಸಲಾಗಿದೆ.

# ಅನುಬಂಧ

೧. ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಪದಕೋಶ

೨. ಮ್ಯಾಸನಾಯಕರ ಬೆಡಗು ಮತ್ತು ದೇವರುಗಳು

೩. ವಕ್ತೃಗಳ ವಿವರ

೪. ಪರಾಮರ್ಶನ ಗ್ರಂಥಗಳು

## ಅನುಬಂಧ - ೧

## ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಪದಕೋಶ

ಮೊಳಕಾಲ್ಮೂರು ತಾಲೂಕಿನ ಮ್ಯಾಸನಾಯಕರ ಭಾಷೆಯನ್ನು ಕುರಿತು ಸಂಗ್ರಹಿಸಿದ ಮಾಹಿತಿಯಲ್ಲಿ ಪದಕೋಶವು ಒಂದಾಗಿದೆ. ಕ್ಷೇತ್ರಕಾರ್ಯದಲ್ಲಿ ವಕ್ತೃಗಳು ಹೇಳಿದ ರೀತಿಯಲ್ಲಿ ೧೪ ವಲಯಗಳಲ್ಲಿ ಪಟ್ಟಿಯನ್ನು ಕೊಡಲಾಗಿದೆ.

೧. ದೇಹದ ಅಂಗಾಂಗಳಿಗೆ ಸಂಬಂಧಿಸಿದ ಪದಗಳು

೨. ನಿತ್ಯೋಪಯೋಗಿ ವಸ್ತುಸೂಚಕ ಪದಗಳು

೩. ಗುಣವಾಚಕ ಪದಗಳು

೪. ಕ್ರಿಯಾಪದಗಳು

೫. ಊರಿಕೇರಿಗೆ ಸಂಬಂಧಿಸಿದ ಪದಗಳು

೬. ಸೊಪ್ಪು ತರಕಾರಿ - ಹಣ್ಣು ಹಂಪಲಕ್ಕೆ ಸಂಬಂಧಿಸಿದ ಪದಗಳು

೭. ಸಂಬಂಧ ಸೂಚಕ ಪದಗಳು

೮. ಆಚರಣೆಗೆ ಸಂಬಂಧಿಸಿದ ಪದಗಳು

೯. ಧವಸ ಧಾನ್ಯಕ್ಕೆ ಸಂಬಂಧಿಸಿದ ಪದಗಳು

೧೦. ಆಹಾರ ಮತ್ತು ಇತರೆ ವಸ್ತುಗಳಿಗೆ ಸಂಬಂಧಿಸಿದ ಪದಗಳು

೧೧. ಸಾಮಾನ್ಯ ವಾಚಕ ಪದಗಳು

೧೨. ಸಂಬೋಧನಾ ರೂಪಗಳು

೧೩. ಕಾಲಸೂಚಕ ಪದಗಳು

೧೪. ಸಂಖ್ಯಾವಾಚಕ ಪದಗಳು

## ೧. ದೇಹದ ಅಂಗಾಂಗಸೂಚಿ ಪದಗಳು

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು |
|---|---|---|---|
| ಅಂಗೈ | ಅರಸ್ಯೆಯಿ | ಅರಸ್ಯೆಯಿ | ಅರಚ್ಯೆಯಿ |
| ಉಗುರು | ಉಗುರು | ಉಗುರು | ಗೋರ್ಲು |
| ಎದೆ | ಯೆದೆ | ಯದ | ಎದ |
| ಕಣ್ಣು | ಕೊಣ್ಣು | ಕಂಡ್ಲು (ಕನ್ನು) | ಕಳ್ಳು |
| ಕತ್ತು | ಕುತ್ತುಗ | ಕುತ್ತುಗ | ಗೊಂತು |
| ಕರಳು | ಕಳ್ಳು | ಪೇಗ್ಲು | ಪೇಗಲು |
| ಕೂದಲು | ಕೂದಲು | ತುಪ್ಪಲು | ವೆಂಟ್ರಿಕುಲು |
| ಕೈಯಿ | ಕೈಯಿ | ಸೈಯಿ | ಚೈಯಿ |
| ತೊಡೆ | ತೊಡೆ | ತೊಡ | ತೊಡ |
| ನಾಲಿಗೆ | ನಾಲಿಕ | ನಾಲಿಕ | ನಾಲುಕ |
| ಬಾಯಿ | ಬಾಯಿ | ನೋರು | ನೋರು |
| ಬೆನ್ನು | ಬೆನ್ನು | ಬೆನ್ನು | ವೀಪು |
| ಬೆರಳು | ಬೊಳ್ಳು/ಬೊಟ್ಟು | ಬೊಳ್ಳು/ಏಡಲು | ವೇಲು/ವೇಳು |
| ಮುಗುಳಿ | ಮುಕುಳಿ | ಪುಟ್ಟಿ/ಗುದ್ದ | ಗುದ್ದ |
| ಮೂಗು | ಮೂಗು | ಮುಕ್ಕ | ಮುಕ್ಕು |
| ಮೂಳೆ | ಎಮುಕೆ | ಎಮುಕ | ಎಮುಕ |
| ಮೊಣಕಾಲು | ಮೊಳಕಾಲು | ಮೊಳಕಾಲು | ಮೊಕಾಲು |
| ಮೊಲೆ | ಮಲಿ | ಸೊನ್ನುಲು | ರೊಮ್ಮು |
| ಹಲ್ಲು | ಅಲ್ಲು | ಪಂಡ್ಲು | ಪಳ್ಳು/ಪಲ್ಲು |
| ಹೊಕ್ಕಳು | ವಕ್ಕಳು | ಬುಡ್ಡೊಕ್ಕಳು | ಬೊಡ್ಡು |
| ಹೊಟ್ಟೆ | ವಟ್ಟೆ | ವಡ್ಲು | ಕಡಪು |

## ೨. ನಿತ್ಯೋಪಯೋಗಿ ವಸ್ತುಸೂಚಕ ಪದಗಳು

| ಶಿಷ್ಟಕನ್ನಡ | ವ್ಯಾಸನಾಯಕರ ಕನ್ನಡ | ವ್ಯಾಸನಾಯಕರ ತೆಲುಗು | ಶಿಷ್ಟತೆಲುಗು |
|---|---|---|---|
| ಆಲಿಕೆ | ಲಾಳಿಕೆ | ಲಾಳಿಕೆ | ಲಾಳಿಕೆ/ಲಾಲಿಕ |
| ಈಳಿಗೆಮಣೆ | ಈಳಿಕತ್ತಿ | ಈಳಪೀರಿ | ಈಳಿಗಮಣೆ/ಕತ್ತಿಪೀಠ |
| ಎಣ್ಣೆ | ಎಣ್ಣೆ | ನ್ಯೂನಿ | ನೂನೆ |
| ಏಣಿ | ನಿಚ್ಚಣಿಕೆ | ಏಣಿ/ನಿಚ್ಚಣಿಕಿ | ಏಣಿ/ನಿಚ್ಚನಕ |
| ಒನಕೆ | ವನಕೆ | [illegible]ರ್ವಾಕಾಲಿ | ರೋಕಲಿ |
| ಒರಳು | ವಳ್ಳು | ರೋಲು | ರೋಲು |
| ಒಲೆ | ವಲೆ | ಪೈಯಿ | ಪೊಯ್ಯಿ |
| ಕಟ್ಟಿಗೆ | ಕಟ್ಟಿಗೆ | ಪುಡಕಲು | ಕಟ್ಟೆಲು |
| ಕತ್ತರಿ | ಕತ್ತರಿ | ಕತ್ತರಿ | ಕತ್ತರಿ |
| ಕನ್ನಡಿ | ಕನ್ನಡಿ | ಕನ್ನಡಿ | ಅದ್ದಮು |
| ಕಸಬರಿಗೆ | ಪೊರಕೆ | ಪರಕಾ | ಪೊರಕ |
| ಕುಡುಗೋಲು | ಕೊಡವಿಲಿ | ಕೊಡವಲಿ | ಗೊಡ್ಡಲಿ |
| ಕೊಡ | ಕೊಡ/ಅರಿವೆ | ಕಡವ/ಗಡಿಗೆ | ಕಡವ/ಬಿಂದ |
| ಕೊಡೆ | ಛತ್ರಿ | ಛತ್ರಿ/ಕೊಡ | ಗೊಡಗು |
| ಗುಂಡು | ಗುಂಡು | ಗುಂಡು | ಗುಂಡು |
| ಚಮಚ | ಗಂಟಿ | ಗಂಟಿ | ಚವಟು |
| ಚಾಪೆ | ಸಾಪೆ | ಸ್ಯಾಪ | ಸಾಪ/ಚಾಪ |
| ಚೆಂಡು | ಸೆಂಡು | ಸೆಂಡು | ಸೆಂಡು |
| ಜರಡಿ | ಜಲ್ಡಿ | ಜಲ್ಡಿ | ಜಲ್ಲಡಿ |
| ತಟ್ಟೆ | ತಟ್ಟೆ | ತಟ್ಟೆ - ತಲಿ | ತಟ್ಟೆ |
| ತುಪ್ಪ | ತುಪ್ಪ | ನ್ಯೆಯಿ | ನೇಯಿ |
| ದೀಪ | ಬುಡ್ಡಿ | ಬುಡ್ಡಿ/ಪಂತೆ | ದೀಪಮು |
| ದಾರ | ದಾರ | ದಾರಮು | ದಾರಮು |
| ನಲ್ಲಿ | ನಲ್ಲಿ | ನಲ್ಲಿ | ನಲ್ಲಿ |
| ಪಾತ್ರೆ | ಡಬರಿ | ಡಬರಿ | ತಪಾಲಿ |

| | | | |
|---|---|---|---|
| ಬಟ್ಲು | ಬಟ್ಲ | ಗಿನ್ನ | ಗಿನ್ನ |
| ಬತ್ತಿ | ವತ್ತಿ | ಏಕು/ವತ್ತಿ | ವತ್ತಿ |
| ಬಾಚಣಿಕೆ | ಬಾಸಣಿಕೆ | ದೂಬಾನಿ | ದೂಬಾನಿ |
| ಬೀಸುವಕಲ್ಲು | ಬೀಸಕಲ್ಲು | ಹಿಸರಾಯಿ | ವಿಸರಾಯಿ |
| ಬೆಣ್ಣೆ | ಬೆಣ್ಣೆ | ಎನ್ನು | ವೆನ್ನ |
| ಮಚ್ಚು | ಮಚ್ಚು | ಮೊಚ್ಚು (ಕೊಡವಲಿ) | ಕತ್ತಿ |
| ರುಬ್ಬುವಗುಂಡು | ರುಬ್ಬಗುಂಡು | ರುಬ್ಬಗುಂಡು | ರುಬ್ಬಗುಂಡು |
| ಹಗ್ಗ | ಹಗ್ಗ | ಪಗ್ಗಮು | ಪಗ್ಗಮು |
| ಹಣತೆ | ದೀಪಂತಿ | ಪಣಿತಿ | ದೀಪಂತಿ |
| ಹೆಂಚು | ಅಂಚು | ಪೆಂಚು | ಪೆಂಚು |

## ೩. ಗುಣವಾಚಕ ಪದಗಳು

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು |
|---|---|---|---|
| ಅಗಲ | ಅಗಲ | ಅಗಲಮು | ವೆಡಲ್ಪು |
| ಅಡ್ಡ | ಅಡ್ಡ | ಅಡ್ಡಮು | ಅಡ್ಡಮು |
| ಆಳ | ಆಳ | ಲೋತ | ಲೋತು |
| ಉದ್ದ | ಉದ್ದ | ಉದ್ದಮು | ಪೊಡುವು |
| ಉಪ್ಪು | ಉಪ್ಪು | ಉಪ್ಪು | ಉಪ್ಪು |
| ಎತ್ತರ | ಎತ್ತರ | ಎತ್ತರಮು | ಎತ್ತರಮು/ಎತ್ತುಗಾ/ಎತ್ತು |
| ಒಳಗೆ | ಒಳಗೆ | ನೋನ | ಲೋಪಲ |
| ಒಳ್ಳೆಯ | ವಳ್ಳೆಯ | ಮಂಚದಿ | ಮಂಚಿದಿ |
| ಕಡಿಮೆ | ಕಮ್ಮಿ | ಕಮ್ಮಿ/ಕಡಿಮ | ತಕ್ಕುವ |
| ಕಾರ | ಕಾರ | ಕಾರಮು | ಕಾರಮು |
| ಕುಳ್ಳ | ಗಿಡ್ಡ | ಗಿಡ್ಡ | ಪೊಟ್ಟಿ |
| ಕೆಳಗೆ | ಕೆಳಗೆ | ಕಿಂದ | ಕ್ರಿಂದ |
| ಗಟ್ಟಿ | ಗಟ್ಟಿ | ಗಟ್ಟಿ | ಗಟ್ಟಿ |
| ಚಿಕ್ಕ | ಸಣ್ಣ | ಸನ್ನ | ಚಿನ್ನ |
| ಡೊಂಕು | ಸೊಟ್ಟು | ಸೊಟ್ಟು | ವಂಕರ |

| | | | |
|---|---|---|---|
| ತುಂಡು | ತುಂಡು | ತುಂಡು | ತುಂಡು |
| ತೆಳ್ಳನೆ | ತೆಳ್ಳಗ | ತೆಳ್ಳಗೆ | ಬಕ್ಕಗ/ಸಲಪು |
| ದಡ್ಡ | ದಡ್ಡ | ದಡ್ಡ | ದಡ್ಡ |
| ದಪ್ಪನೆ | ದಪ್ಪಗ | ದಪ್ಪಮು | ಲಾವುಗ |
| ದೂರ | ದೂರ | ದೂರಮು | ದೂರಮು |
| ನಡುವೆ | ನಡುವೆ | ನಡಮ | ನಡುಮ |
| ನೇರ | ನೆಟ್ಟಗೆ | ನೆಟ್ಟಗೆ | ನೀಟುಗಾ |
| ಬಾರ | ಬಾರ | ಬಾರಮು | ಭರುವು |
| ಬಹಳ | ಬಾಳ | ಬಾಳಮು/ಸ್ಯಾನ | ಚಾಲ/ಚಾನ |
| ಲಾಭ | ನಾಭ | ನಾಭ | ಲಾಭಂ |
| ಸ್ವಲ್ಪ | ಸಲ್ಪ/ರೊವಷ್ಟು | ರವಂತ/ಕಸಂತ | ಕೊಂಚಮು |
| ಹಳೆಯ | ಹಳೆಯ | ಪಾತಿದಿ | ಪಾತದಿ |
| ಹೊಸ | ಹೊಸ | ಕೊತ್ತ | ಕ್ರೊತ್ತ |

## ೪. ಕ್ರಿಯಾ ಪದಗಳು

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು |
|---|---|---|---|
| ಅದುಮು | ತುರುಕು | ತುರುಕು | ಅದುಮು |
| ಆಡು | ಆಡು | ಆಡು | ಆಡು |
| ಇಡು | ಇಡು | ಪೆಟ್ಟು | ಪೆಟ್ಟು |
| ಇಳಿ | ಇಳಿ | ದಿಗ್ಗು | ದಿಗು |
| ಉಗುಳು | ಉಗ್ಳು | ಉಮಿ | ಉಮಿ |
| ಉಜ್ಜು | ತಿಕ್ಕು | ತಿಕ್ಕು | ತಿಕ್ಕು/ತೋಮು |
| ಊದು | ಊದು | ಊಬು | ಊಪು |
| ಓಡು | ಓಡು | ಓಡ/ಪಾರು | ಪಾರು |
| ಓದು | ಓದು | ಓದು | ಚದವು |
| ಏರು | ಎಕ್ಕು | ಎಕ್ಕು | ಎಕ್ಕು |
| ಕಡಿ | ಕಡಿ | ನೊರಕು | ನರಕುತ |

| | | | |
|---|---|---|---|
| ಕುದಿ | ಕುಡಿ | ತಾಗು | ತಾಗು/ತ್ರಾಗು |
| ಕುದಿ | ಕುದಿ | ಉಡುಕು | ಉಡುಕು |
| ಗುದ್ದು | ಗುದ್ದು | ಗುದ್ದು | ಗುದ್ದು |
| ಚಾಚು | ಸಾಚು | ಸಾಪು | ಚಾಪು/ಸಾಪು |
| ಬಿಚ್ಚು | ಬಿಚ್ಚು | ದುಪ್ಪಿ | ವಿಪ್ಪಿಯಿ/ವಿಪ್ಪು |
| ಚೆಲ್ಲು | ಸೆಲ್ಲು | ಸೆಲ್ಲು | ಚೆಲ್ಲು/ವಿಸುರು |
| ಜಾರು | ಜಾರು | ಜಾರು | ಜಾರು |
| ಜಿಗಿ | ಜಿಗಿ | ಎಗರು | ಎಗರು |
| ತುಳಿ | ತುಳಿ | ತೊಕ್ಕು | ತೊಕ್ಕು |
| ತುಂಬು | ತುಂಬು | ನಿಂಪು | ನಿಂಪು |
| ತೂರು | ತೂರು | ತೂರು | ತೂರು |
| ತೊಳೆ | ತೊಳೆ | ಕೆಡುಗು | ಕಡಗುಟ |
| ತೊಡು | ತೊಡು | ಏಸಗಾ | ವೇಯು |
| ನೋಡು | ನೋಡು | ಸೂಡು | ಚೂಡು |
| ಬರೆ | ಬರೆ | ಬರೆ | ವ್ರಾಯುಟ |
| ಬಳಸು | ವಾಡಿಕೆ | ವಾಡಿಕೆ | ವಾಡಿಕೆ |
| ಬೀಳು | ಬೀಳು | ಪಡು | ಪಡು |
| ಮಡಚು | ಮುದುರು | ಮಡುಸು | ಮಡತ |
| ಮುಳಗು | ಮುಣ್ಣು | ಮುಳ್ಗು | ಮುನುಗು |
| ಹೊಡೆ | ವೂಡೆ | ಅಡಿ | ಕೊಟ್ಟು |
| ಹೋಗು | ವೋಗು | ಪೋ | ಪೋ |

## ೫. ಊರು ಕೇರಿಗೆ ಸಂಬಂಧಿಸಿದ ಪದಗಳು

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು |
|---|---|---|---|
| ಅಂಗಡಿ | ಅಂಗಡಿ | ಅಂಗ್ಡಿ | ಅಂಗಡಿ |
| ಅಂಗಳ | ಅಂಗ್ಳ | ಅಂಗಳಮು | ಅಂಗಳಮು |
| ಇಟ್ಟಿಗೆ | ಎಳ್ಳೆ | ಪೆಳ/ಪೆಲ್ಲಾ | ಪೆಳ್ಳಾ |
| ಊರು | ಊರು | ಊರು | ಊರು |

| | | | |
|---|---|---|---|
| ಓಣಿ | ಓಣಿ | ಓಣಿ | ವಾಡ/ವೀಧಿ |
| ಕಂಬ | ಕಂಬ | ಕಂಬಮು | ಸ್ತಂಭಂ |
| ಕೋಟೆ | ಕ್ವಾಟೆ | ಕ್ವಾಟ | ಕೋಟ |
| ಗುಡಿಸಲು | ಗುಡಿಸಲು | ಗುಡಿಸಲು | ಗುಡಿಸೇನು/ಕೊಟ್ಟಮು |
| ಗೂಡು | ಗೂಡು | ಗೂಡು | ಗೂಡು |
| ಗೋಡೆ | ಗ್ವಾಡೆ | ಗ್ವಾಡ | ಗೋಡಾ |
| ತಲೆದಿಂಬು | ತಲೆದಿಂಬು | ತಲಮೂಟ | ತಲಮುಡಿ |
| ತಲೆಬಾಗಿಲು | ತಲಬಾಗಿಲು | ತಲವಾಕಿಲಿ | ತಲವಾಕಿಲಿ/ಗುಮ್ಮಂ |
| ತೊಟ್ಟಿಲು | ತೊಟ್ಲು | ತೊಟ್ಲು | ಊಯಲ |
| ಬಾವಿ | ಬಾಯಿ | ಬಾಯಿ | ಬಾವಿ / ಬಾಯಿ |
| ಬೀದಿ | ಓಣಿ | ಓಣಿ | ವೀದಿ/ವಾಡ |
| ಬೀಗ | ಬೀಗ | ಬೀಗಮು | ಚೆವಿ |
| ಮೆಟ್ಟಿಲು | ಮೆಟ್ಲು | ಪಾಟಿಗಲು | ಮೆಟ್ಲು |

## ೬. ಸೊಪ್ಪು ತರಕಾರಿ ಸೂಚಕ ಪದಗಳು

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು |
|---|---|---|---|
| ಈರುಳ್ಳಿ | ಉಳ್ಳಾಗಡೆ | ಉಳ್ಳಾಗಡೆ | ಉಲ್ಲಿಗಡ್ಡ/ಉಲ್ಲಿಪಾಯಿ |
| ಕಲ್ಲಂಗಡಿ | ಕಲ್ಲಂಗಡಿ | ಕಲ್ಲಂಗಡಿ | ಕಲ್ಲಂಗರಿ |
| ಕುಂಬಳಕಾಯಿ | ಗುಮ್ಮಡಕಾಯಿ | ಗುಮ್ಮಡಕಾಯಿ | ಗುಮ್ಮಡಕಾಯಿ |
| ಕೊತ್ತಂಬರಿ | ಕೊತ್ತಿಂಬಿರಿ | ಕೊತ್ತಂಬ್ರಿ | ಕೊತ್ತಮಿರಿ |
| ತೆಂಗಿನಕಾಯಿ | ಟೆಂಗಿನಕಾಯಿ | ಟ್ಯಾಂಕಾಯಿ | ಟೆಂಕಾಯಿ |
| ಪರಂಗಿ | ಪರಂಗಿ | ಪರಂಗಿ | ಪಪ್ಪಾಯಿ |
| ಬಾಳೆಹಣ್ಣು | ಬಾಳೆಹಣ್ಣು | ಬಾಳೆಪಂಡು | ಅರಟಿಪಂಡು |
| ಬೆಳ್ಳಗಡ್ಡೆ | ಬೆಳಾಗಡ್ಡೆ | ಎಲ್‌ಗೆಡ್ಡ/ಬೆಳ್ಳಗಡ್ಡ | ಉಲಿಪಾಯಿ |
| ಮಾವು | ಮಾಮಿಡಿ | ಮಾಮಿಡಿ/ಮಾಡಿ | ಮಾಮಿಡಿ |
| ಮೂಲಂಗಿ | ಮೂಲಂಗಿ | ಮೂಲಂಗಿ | ಮೂಲಂಗಿ/ಮುಲ್ಲಂಗಿ |
| ಮೆಣಸಿನಕಾಯಿ | ಮೆಣಸಿನಕಾಯಿ | ಮಿರಪಕಾಯಿ | ಮೆರಪಕಾಯಿ |
| ಸೇಬು | ಸೇಬು | ಸೇಬು | ಸೇಬು |

| | | | |
|---|---|---|---|
| ಸೀತಫಲ | ಸೀತಾಫತಾಳ | ಪುಟೇಸಲು ಕಾಯಿ | ಸೀತರಾಮ ಪಂಡು |
| | | ಪುಡೇಸಲು ಕಾಯಿ | ಸೀತಾಫಲಂ |
| | | ಪುಟ್ಟೇಸನ ಕಾಯಿ | |
| ಹಲಸು | ಅಲ್ಸು | ಅಲ್ಸು | ಪಲಸು/ಪನಸು |
| ಹೀರೆಕಾಯಿ | ಬೀರಕಾಯಿ | ಬೀರಕಾಯಿ | ಬೀರಕಾಯಿ |

## ೨. ಸಂಬಂಧ ಸೂಚಕ ಪದಗಳು

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು |
|---|---|---|---|
| ಅಕ್ಕ | ಯಕ್ಕಾ | ಯಕ್ಕ/ಅಕ್ಕ | ಅಕ್ಕ |
| ಅಕ್ಕನ ಗಂಡ | ಬಾವ | ಬಾವ | ಬಾವ |
| ಅಣ್ಣ | ಅಣ್ಣ/ಯಣ್ಣಾ | ಅನ್ನ / ಯನ್ನಾ | ಅನ್ನಯ್ಯ |
| ಅಣ್ಣನ ಹೆಂಡತಿ | ಅತ್ತಿಗೆ | ವದಿನಾ/ವದ್ನೆ | ವದಿನಾ |
| ಅತ್ತೆ | ಅತ್ತೆ/ಯತ್ತಾ | ಅತ್ತ / ಯತ್ತ | ಅತ್ತ |
| ಅಳಿಯ | ಅಳಿಯ | ಅಲ್ಲುಡು | ಅಲ್ಲುಡು |
| ಗಂಡ | ಗಂಡ | ಮಗುಡು | ಭರ್ತ |
| ಚಿಕ್ಕಪ್ಪ | ಚಿಗಪ್ಪ/ಸಣ್ಣಪ್ಪ | ಸನ್ನಯ್ಯ | ಚಿನ್ನಾಯನ |
| ಚಿಕ್ಕಮ್ಮ | ಸಣ್ಣಮ್ಮ | ಸನ್ನಮ್ಮ | ಚಿನ್ನಮ್ಮ |
| ತಂಗಿ | ತಂಗಿ | ತಂಗಿ | ಚೆಲ್ಲೆಲು/ಚೆಲ್ಲಾಯಿ |
| ತಂದೆ | ಯಪ್ಪಾ | ಅಯ್ಯ | ತಂಡ್ರಿ |
| ತಮ್ಮನ ಹೆಂಡತಿ | ಸೊಸೆ | ಕ್ಯಾಡ್ಲಿ | ಮರದಾಲು/ಕೋಡಲು |
| ತಾತ | ತಾತ | ತಾತ | ತಾತ |
| ತಾಯಿ | ಅಮ್ಮ | ಅವ್ವ/ಅಮ್ಮ | ಅಮ್ಮ/ತಲ್ಲಿ |
| ದೊಡ್ಡಪ್ಪ | ದೊಡ್ಡಪ್ಪ | ಗೊಪ್ಪಯ್ಯ | ಪೆದ್ದನಾಯನ |
| ದೊಡ್ಡಮ್ಮ | ದೊಡ್ಡಮ್ಮ | ಗೊಪ್ಪಮ್ಮ | ಪೆದ್ದಮ್ಮ |
| ನಾದಿನಿ | ಹೆಣ್ಮಗಳು | ಆಡಬಿಡ್ಡ | ಆಡಪಡುಚು |
| ಬೀಗರು | ಬೀಗರು | ಬೀಗಲು | ಬಂದುವುಲು/ಚುಟ್ಟರಿಕಲು |
| ಮಗ | ಮಗ | ಕೊಡಕು | ಕೊಡಕು |
| ಮಗಳು | ಮಗಳು | ಬಿಡ್ಡ | ಕೂತುರು/ಬಿಡ್ಡ |

| | | | |
|---|---|---|---|
| ಮಲತಾಯಿ | ಮಲತಾಯಿ | ಮಲತಲ್ಲಿ | ಮಲತಲ್ಲಿ |
| ಮೊಮ್ಮಗ | ಮನಮುಡು | ಮನಮುಡು | ಮನವಡು |
| ಮೊಮ್ಮಗಳು | ಮೊಮ್ಮಗಳು | ಮನ್ಮಬಿಡ್ಡ | ಮನಮರಾಲು |
| ಮೈದುನ | ಮರದಿ | ಮರದಿ | ಮರದಿ/ಮರ್ದಿ |
| ಸೋದರಮಾವ | ಸೋದರಮಾವ | ಮ್ಯಾನ ಮಾಮ | ಮ್ಯಾನ ಮಾಮ |
| ಹೆಂಡತಿ | ಹೆಂಡ್ತಿ / ಏಣ್ತಿ | ಆಲು | ಭಾರ್ಯ/ಪೆಳ್ಳಾಂ |

## ೮. ದವಸಧಾನ್ಯದ ಪದಗಳು

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು |
|---|---|---|---|
| ಅವರೆಕಾಯಿ | ಚಳಂಬರೆಕಾಯಿ | ಅವರೆಕಾಯಿ | ಅನಪಗಿಂಜ/ಅನುಪಕಾಯಿ |
| ಉದ್ದಿನಬೇಳೆ | ಉದ್ದುಬ್ಯಾಳೆ | ಉದ್ದುಬ್ಯಾಡ್ಲು | ಉದ್ದಿಬ್ಯಾಳ್ಳು |
| ಎಳ್ಳು | ಎಳ್ಳು | ನೂಲು | ನೊಗಲು/ನೂಲು |
| ಕಡಲೆ | ಕಡ್ಲಿ | ಕಡ್ಲಿ | ಪಪ್ಪಲು |
| ಗೋದಿ | ಗೋದಿ | ಗೋದಮುಲು | ಗೋದಮುಲು |
| ಜೋಳ | ಜೋಳ | ಜೊಂಡ್ಲು/ಜೊನ್ನಲು | ಜೊನ್ನಲು |
| ತೊಗರಿ | ತೊಗರಿ | ತೊಗರಲು | ಕಂದಿಬ್ಯಾಳು |
| ನವಣೆ | ನವಣೆ | ಕ್ವರಲು | ಕೊರ್ರಲು/ಒಡ್ಲು |
| ರಾಗಿ | ರಾಗಿ | ರಾಗ್ಲು | ರಾಗುಲು |
| ಶೇಂಗ | ಕಡ್ಲೆಕಾಯಿ | ನೆಟೆಕಾಯಿ | ಚನಗಿತ್ತನಾಲು/ಚನಕ್ಕಾಯಿ |
| ಸಜ್ಜೆ | ಸಜ್ಜಿ | ಸಜ್ಜಲು | ಸದ್ದಲು |
| ಹೆಸರು | ಎಸರು | ಪೆಸ್ಲು | ಪೆಸಲು |
| ಹುರುಳಿ | ವುಲುವಲು | ಉಲವಲು | ಉಲವಲು |

## ೯. ಆಚರಣೆಗೆ ಸಂಬಂಧಿಸಿದ ಪದಗಳು

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು |
|---|---|---|---|
| ಅಕ್ಕಿ | ಅಕ್ಕಿ | ಬೀಲು | ಬಿಯ್ಯಮು |
| ಅಕ್ಷತೆ | ಅಕ್ಕಿಕಾಳು | ಬೀಮುಕಾಳು/ಬೀಲುಕಾಳು | ಅಕ್ಷಿಂತಲು |
| ಓಕಳಿ | ಓಕಳಿ | ಓಕಳಿ | ಓಕಳಿ |
| ಕಳಸ | ಕಳಸ | ಕಳಸಮು | ಕಳಸಮು |
| ಕಾಯಿ | ಕಾಯಿ | ಕಾಯಿ | ಕಾಯಿ |
| ಕುಂಕುಮ | ಕುಂಕುಮ | ಕುಂಕುಮ | ಕುಂಕುಮ |
| ನಿಶ್ಚಿತಾರ್ಥ | ಎಲೆ ಅಡಿಕೆ ಶಾಸ್ತ್ರ | ವಕ್ಕಾ ಶಾಸ್ತ್ರಮು | ಮಂಚಿಮಾಟ |
| ಪೂಜೆ | ಪೂಜಿ | ಪೂಜಿ | ಪೂಜ |
| ಮಣೇವು | ಮಣೇವು | ಮಣೇಮು | ಮಣೆಮು |
| ಮದುಮಗ | ಮದ್ಲಿಂಗ | ಮದ್ಲಿಂಗಡು | ಪೆಳ್ಳಿಕೊಡಕು |
| ಮದುವೆ | ಮದುವೆ | ಪೆಂಡ್ಲಿ | ಪೆಳ್ಳಿ |
| ಮಾಂಗಲ್ಯ | ತಾಳಿ | ತಾಳಿ/ಬೊಟ್ಟು | ಮಾಂಗಲ್ಯಮು |
| ಮುಹೂರ್ತ | ಮೂರ್ತ | ಮೂರ್ತ | ಮುಹೂರ್ತಮು |
| ರಥ | ತೇರು | ತೇರು | ರಥಮು |
| ವಿಭೂತಿ | ಇಭಿತ್ತಿ | ಇಭಿತ್ತಿ | ವಿಭೂದಿ |
| ಹೂವು | ಹೂವು | ಪೂಲು | ಪೂವಲು |

## ೧೦. ಆಹಾರ ಮತ್ತು ಇತರೆ ವಸ್ತುಗಳಿಗೆ ಸಂಬಂಧಿಸಿದ ಪದಗಳು

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು |
|---|---|---|---|
| ಅನ್ನ | ಅನ್ನ/ಬಾನ | ಅಂಬಲಿ/ಬುವ್ವ | ಅನ್ನಮು |
| ಮುದ್ದೆ | ಮುದ್ದೆ | ಮುದ್ದ | ಮುದ್ದ |
| ಚಟ್ನಿ | ಉರುಬಿಂಡಿ | ಹಿಂಡಿ | ಪಚಡಿ/ಚಟ್ನಿ |
| ದೋಸೆ | ದ್ಯಾಸೆ | ದ್ಯಾಸೆ | ದೋಸಾ |
| ಪಾಯಸ | ಉಗ್ಗಿ | ಉಗ್ಗಿ | ಪಾಯಸಮು |
| ಸಂಬಾರು | ಸಾರು | ಅಗಲಿಕಾ/ಅಗಟಿಕಾ | ಸಂಬಾರ |

## ೧೧. ಸಾಮಾನ್ಯ ವಾಚಕ ಪದಗಳು

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು |
|---|---|---|---|
| ಇಕ್ಕಳ | ಇಕ್ಕಳ | ಇಕ್ಕಳಮು | ಪಟಕರ |
| ಔಷಧ | ಮಂದು | ಮಂದು | ಮಂದು |
| ಕಸ | ಸದೆ | ಸದ/ಕಸವು | ಕಸವು |
| ಗಾಣ | ಗಾಣ | ಗಾಣಮು | ಗಾಣಮು |
| ಗುಳಿಗೆ | ಗುಳಿಗೆ | ಗುಳಿಗೆ | ಮಾತ್ರಲು |
| ಚಪ್ಪರ | ಚಪ್ಪರ | ಚಪ್ಪರಮು | ಚಪ್ಪರಮು |
| ಚಾವಟಿ | ಬಾರಕೋಲು | ಬಾರಕೋಲು/ಸೆಲುಕೋಲು | ಬಾರಕೋಲು |
| ದೂಳು | ದೂಳು | ದುಮ್ಮು/ದೂಳು | ದುಮ್ಮು |
| ದೋಣಿ | ದೋಣಿ | ದೋಣಿ | ಪಡವ |
| ಬಲೆ | ಬಲೆ/ವಲೆ | ವಲ | ವಲ |
| ಸಗಣಿ | ಸಗಣಿ | ತಪ್ಪ | ಪ್ಯಾಡ |

## ೧೨. ಸಂಬೋಧನಾ ರೂಪಗಳು

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು |
|---|---|---|---|
| ಅಕ್ಕ | ಯಕ್ಕ/ಎಕ್ಕ | ಅಕ್ಕ /ಎಕ್ಕ | ಅಕ್ಕ |
| ಅಣ್ಣ | ಅಣ್ಣ / ಯಣ್ಣ | ಅನ್ನ / ಯನ್ನಾ | ಅನ್ನ |
| ಅಜ್ಜಾ | ಅಜ್ಜ/ತಾತ | ತಾತ | ತಾತ |
| ಅಜ್ಜಿ | ಅಜ್ಜಿ | ಅಬ್ಬ | ಅವ್ವಾ |
| ಅತ್ತೆ | ಅತ್ತೆ | ಅತ್ತ/ಯತ್ತ | ಅತ್ತಾ |
| ಅಮ್ಮ | ಅಮ್ಮ | ಅವ್ವ | ಅಮ್ಮ |
| ಅಪ್ಪ/ತಂದೆ | ಅಪ್ಪ/ಯಪ್ಪ | ಅಯ್ಯ/ಯಯ್ಯ | ನಾನ್ನ/ನಾಯನ |
| ಅವನೇ | ಅವ್ನೇ | ವಾಡೇ | ವಾಡೇ |
| ಅವರೆ | ಅವ್ವೇ | ವಾರೇ | ವಾಳ್ಳು |
| ಏನು | ಏನು | ಏಡದಿ | ಏಂಟಿ/ಏಮಿಟಿ |
| ಏನೇ | ಏನೇ | ಏಮೇ | ಏಮೇ |
| ಲೇ | ಲೇ | ಲೇ | ರೇ/ಒರೇಯ್ |

## ೧೩. ಕಾಲ ಸೂಚಕ ಪದಗಳು

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು |
|---|---|---|---|
| ಕತ್ತಲು | ಮಬ್ಬು | ಮಬ್ಬು | ಮಬ್ಬು/ರೇಯಿ |
| ಚಳಿ | ಸಳಿ | ಸಲಿ | ಚಲಿ |
| ದಿನ | ದಿನ | ದಿನಮು | ರೋಜು |
| ನಾಳೆ | ನಾಳೆ | ರೇಪು | ರೇಪು |
| ಬೇಸಿಗೆ | ಬ್ಯಾಸಿಗೆ ಕಾಲ | ಯ್ಯಸಿಗ ಕಾಲಮು | ಎಂಡಕಾಲಮು |
| ಬೆಳಿಗ್ಗೆ | ಬೆಳಿಗ್ಗ | ರೆಕಾಡು/ರೆಕಾಟ | ಪ್ರದ್ದುನ |
| ಶಕೆ | ಉಡಕು/ಶಕೆ | ಉಡುಕು/ಶಕ | ವೇಡಿ |
| ಸ್ವಲ್ಪ | ರೊವಷ್ಟು | ರೊವಂತ | ಕೊಂಚಮು |
| ಸರಿರಾತ್ರಿ | ಸರವತ್ತು | ಸರಬದ್ದು | ಸಗಮಪೊದ್ದು |
| ಹಗಲು | ಅಗಲು | ಪಗಲು | ಪಗಲು |

## ಸಂಖ್ಯಾವಾಚಿ ಸೂಚಕಗಳು

| ಶಿಷ್ಟಕನ್ನಡ | ಮ್ಯಾಸನಾಯಕರ ಕನ್ನಡ | ಮ್ಯಾಸನಾಯಕರ ತೆಲುಗು | ಶಿಷ್ಟತೆಲುಗು |
|---|---|---|---|
| ಒಂದು | ಒಂದು | ವಕ್ಕಿ | ಒಕಟಿ |
| ಎರಡು | ಎರಡು | ರೊಂಡು | ರೆಂಡು |
| ಮೂರು | ಮೂರು | ಮೂಡು | ಮೂಡು |
| ನಾಲ್ಕು | ನಾಲ್ಕು | ನಾಲ್ಗು | ನಾಲ್ಗು |
| ಐದು | ಐದು | ಐದು | ಐದು |
| ಆರು | ಆರು | ಆರು | ಆರು |
| ಏಳು | ಏಳು | ಏಡು | ಏಡು |
| ಎಂಟು | ಎಂಟು | ಎನಿಮ್ದಿ | ಎನಿಮ್ದಿ |
| ಒಂಬತ್ತು | ಒಂಬತ್ತು | ತೊಮ್ಮಿದಿ | ತೊಮ್ಮಿದಿ |
| ಹತ್ತು | ಹತ್ತು | ಪದಿ | ಪದಿ |
| ನೂರು | ನೂರು | ನೂರು | ವಂದ |
| ಸಾವಿರ | ಸಾವಿರ | ಸಾವಿರು | ವೇಯಿ |
| ಇನ್ನೊಂದು | ಇನ್ನೊಂದು | ಇನ್ನೊಕ್ಕಿ | ಮರೊಕಟಿ |

# ಅನುಬಂಧ - ೨

ಮ್ಯಾಸನಾಯಕರು ಹಲವಾರು ಶತಮಾನಗಳ ಕಾಲ ಕನ್ನಡ ಪ್ರದೇಶದಲ್ಲಿ ನೆಲೆಸಿದ್ದರೂ ಸಹ ಅವರ ಬೆಡುಗು ಮತ್ತು ದೇವರುಗಳಿಗೆ ಸಂಬಂಧಿಸಿದ ಪದಗಳು ಮೂಲತಃ ತೆಲುಗು ಭಾಷೆಯಲ್ಲಿ ಕಂಡುಬರುವುದು ವಿಶೇಷವಾಗಿದೆ. ಸಾಂಸ್ಕೃತಿಕವಾಗಿ ಭಾಷೆಯನ್ನು ಈ ನೆಲೆಯಲ್ಲಿ ಸಂಗೋಪನೆ ಮಾಡವುದು ಕಂಡುಬರುತ್ತದೆ. ಬೆಡಗು ಮತ್ತು ದೈವಗಳಿಗೆ ಸಂಬಂಧಿಸಿದ ಪದಕೋಶವನ್ನು ಈ ಕೆಳಗೆ ನೀಡಲಾಗಿದೆ.

**೨. ಮ್ಯಾಸನಾಯಕರ ಬೆಡಗು ಮತ್ತು ದೇವರುಗಳು**

| | | | |
|---|---|---|---|
| ಮಂದಲಗೋತ್ರ | ಮಾರಮ್ಮನ ಬುಟ್ಟುಗಲು | ಬೊಮ್ಮದೇವರ ಬುಟ್ಟಗಲು | |
| ಸಿದ್ದಿಹಳ್ಳಿ ಬುಟ್ಟುಗಲು | ಮಾದೇಲಿಂಗೇಶ್ವರ ಬುಟ್ಟಗಲು | ಸಕ್ಕಬಾಪಲವಾಡು | |
| ಸೊಂಟನಾಡು | ಸಿಲುಕನವಾಡು | ಎನುಮಲಬ್ಬನ ವಾಡು | |
| ನಡ್ಡಿ ಬೊಮ್ಮತ್ತಿನಾಡು | ಎಂಜಿ ಮುತ್ತಿವಾಡು | ನಲ್ಲಿವಾಡು | ಓಬಳದೇವರು |
| ಕೊಡಗನೋರು | ಮಳೇಲರು | ರಣಗಬ್ಬಮುತ್ತಿನಾಡು | |
| ಓದುಮೇಳ ಮುತ್ತಿವಾಡು | ಸೊಟ್ಟಮುತ್ತಿವಾಡು | ನಿಜಮುತ್ತಿವಾಕು | |
| ಗಿಡ್ನ ಮುತ್ತಿವಾಡು | ನಾಗಮುತ್ತಿವಾಡು | ಪಾಮುಡಲಾರು | ಗುರುನಾಥ ದೇವರು |
| ಪಾಲಮುತ್ತಿವಾಡು | ಮಾಸಿಲುವಾಡು | ಮಂಗಪೋಟಿ ಮಾಸಿಲು | |
| ಕುಂಟಿಮಾಸಿಲು | ವರವುಮಾಸಿಲು | ಕೊತ್ತಕೋಟ ಮಾಸಿಲು | |
| ಮಲ್ಲೂರು ಮಾಸಿಲು | ಬೊಟ್ಟಮಾಸಿಲು | ಬೊಮ್ಮತ್ತಿವಾರು | |
| ವರಗನ ಬೊಮ್ಮತ್ತಿ | ನಡ್ಡಿಬೊಮ್ಮತ್ತಿ | ಗಿಡ್ನಮುತ್ತಿವಾಡು | |
| ನಾಗಮುತ್ತಿವಾಡು | ಪಾಲಮುತ್ತಿವಾಡು | ಮಾಸಿಲುವಾರು | |
| ಮಂಗಪೋಟಿಮಾಸಿಲು | ಕುಂಟಿಮಾಸಿಲು | --------------- | ಓಬಳದೇವರು |
| ಮಲ್ಲೂರು ಮಾಸಿಲು | ವರಗನಬೊಮ್ಮತ್ತಿ | ಸೂಟ್ಟುಬೊಮ್ಮತ್ತಿ | |
| ವಟ್ಟಬೊಮ್ಮತ್ತಿ | -------------- | -------------- | ಬೊಮ್ಮದೇವರು |
| ಮಲ್ಲಿನಾಯಕನೋರು | ಯರಗೊಡ್ಲುವಾಡು | ಕೌಟಿಬ್ಬನವಾಡು | |
| ನಲ್ಲಬಾಳಸಿವಾಡು | ನೆಡಗಿಲವಾಡು | ವರಗನೋಡು | |
| ಚಿನ್ನಮುತ್ತಿವಾಡು | ಜೊಗನೋಡು | ಗಜ್ಜಿಗನೋರು | |
| ಬಿದ್ದನೋರು | ಬುಡ್ಡುಬೋರನವೋರು | ಕಗ್ಗಲ್ಲವಾರು | |
| ಮೊಲ್ಲೂರುವಾರು | ಅಲಿಕೋರು | -------------- | ಓಬಳ ದೇವರು |
| ನಲ್ಲಬ್ಬನೋರು | ಯರಬೊಮ್ಮನವಾರು | ಪರಮೇಸಿನವಾರು (ಚಿತ್ರದೇವರು) | |

| | | | |
|---|---|---|---|
| ಬಿದ್ದನೋಡು | ಕೊಕ್ಕನೋಡು | ಕೊಡಗನೋಡು | |
| ನಲ್ಲಬಾಮುಡ್ಲು | ಮನ್ನುಲೋರು | ದೊಣಮಂಡ್ಲು | ರಾಜಲುದೇವರು |
| ಬುಲ್ಲಡಲೋರು | -------------- | -------------- | ಬಂಗಾರದೇವರು |
| ನಲ್ಲಬಾಪಲಗೋತ್ರ | -------------- | ಗುಡ್ಡಮೆದ್ದುಲವಾರು | ದಡ್ಡಿಸೂರನಾಯಕ |
| ಮಂದಲೋರು | ಎನುಮುಲೋರು | ಬುಡ್ಡಬೋರನೋರು | ಗಾದರಿ |
| ಬೋಡಿಬುಲ್ಲಡಲೋರು | ----------- | ----------- | ಬಂಗಾರದೇವರು |
| ಮಚ್ಚು ಬುಲ್ಲಡಲವರು | ಯರ್ರಳ್ಳನಾಯಕನೋರು | ದಾಸಳ್ಳನಾಯಕನೋರು | |
| ಗಿಡ್ಡಮುತ್ತಿನೋರು | ನಾಗಮತ್ತಿನಾರು | ಪಾಲಮುತ್ತಿವಾರು | |
| ಮಾರಮ್ಮಬುಟ್ಟುಗಲು | ಬೊಮ್ಮದೇವರ ಬುಟ್ಟುಗಲು | ಸಿದ್ಧಪಲ್ಲಿ ಬುಟ್ಟಗಲು | ಬೊಮ್ಮ ಮತ್ತು ಮಾರಮ್ಮ |
| ಮಾದೇಲಿಂಗಪ್ಪ ಬುಟ್ಟಗಲು | ----------- | ----------- | ಮಾದೇಲಿಂಗ ದೇವರು |
| ಸೂರ್ಯಕಾಮ | ಬುಡ್ಡೇಪಾಪಲು | ಬಿಲ್ಲನೋರು | |
| ರ್‍ಯಾಬಲೋರು | ದೊಡ್ಡಮುತ್ತಿನೋರು | ಬೋಸೇನೋರು | ಬೋಸೇ ದೇವರು |
| ಮೀಸಲೋರು | ----------- | ----------- | ಮಾರಮ್ಮ |
| ಬೋರೇ ಪಾಡ್ಲುವಾರು | ಯರಪಾಮಡಲೋರು/ಜರಕನವಾಡು | ----------- | ಮುತ್ತಿಗಾರ ಮಾರಮ್ಮ |
| ದಡ್ಡಿಸೂರನಾಯಕನೋರು | ಮಾಲಕೇತಿ | ಎದ್ದುಲವಾರು | |
| ನಲದಮ್ಮನಾಯಕನೋರು | | | |
| ನಲ್ಲಬಾಪನೋರು | ಪದ್ದಪಲ್ಲಿ ಮಾಸಿಲುವಾರು | ----------- | ದಡ್ಡಿಸೂರನಾಯಕ |
| ದಾಸವಡೆಯರು | ಅಚ್ಚವಲಿ | ವಡೆಯರು | ಗೂಳಿಮುಗೋತ್ರ |
| ಕೌಲೋರು | ----------- | ----------- | ರಾಜಲದೇವರು |
| ಸಿದ್ದಪಲ್ಲಿದಿದ್ದಲೋರು | ಪಾಮಡಲೋರು | ----------- | ಗುರುನಾಥ |
| ಬಿರುದುಪಾಮಡಲು | ರಸಸಿದ್ದ ಪಾಮಡಲು | ತಾತಾಚಾರಿ | ಪಾಮುಡ್ತಾರು |
| ಗುರುಪಾಮುಡಲು | ಯರಪಾಮಡಲು | ನಲಪಾಮಡಲು | |
| ಜರಕು ಪಾಮಡಲು | ದ್ಯಾವುಡ್ಲವಾರು | ----------- | ಓಬಳದೇವರು |
| ಕುಂಡರ್ಲವಾರು | ಮಲಕೋಟಿ ಎದ್ದುಲವಾರು | ಗುಡ್ಡಮು ಎದ್ದುಲವಾರು | |
| ಕ್ಯಾಸಾಪುರದ ಕ್ಯಾಸನೋರು | ಬುಡ್ಡಬೋರನೋರು | ಬೋಡಿದಾಸರಿ | |
| ಕಾಮಗೇತಿಲೋರು | ಕುಕ್ಕನೋರು | ----------- | ಚಿತ್ರಲಿಂಗದೇವರು |
| ಬೆಲ್ಲಲೋರು | ಬೋಡೇಪಡ್ಲುವಾರು | ----------- | ಪದಿ |
| ಪೂವಲೋರು | ----------- | ----------- | ಪೆನ್ನೊಬಳ |
| ನನ್ನುಲೋರು | ----------- | ----------- | ಬೊಮ್ಮ |
| ದಡ್ಡಿಮುತ್ತಿವಾರು | ----------- | ----------- | ದಡ್ಡಿಮುತ್ತಿ |
| ಅಬ್ಬರಾಜಲೋರು | ಅಬ್ಬನೋರು | ಕ್ಯಾತಪುಲುವಾರು | ಗಾದರಿ |

| | | | |
|---|---|---|---|
| ಮೊನ್ನುಲುವಾರು | ಪಾಲಬ್ಬನೋರು | ----------- | ರಾಜಲ |
| ದ್ಯಾವರಗೊರ್ಲುವಾರು | ಕರಿನಾರು | ಗ್ರಾಮಬ್ಬನೋರು | ಕಂಪಳ |
| ಪೊಟ್ಟಪೊಲ್ಲಲೋರು | ಪುವ್ವಲೋರು | ----------- | ಬೋರೇ |
| ಪೆದ್ದನಾರು | ಬೊಗ್ಗಲೋರು | ಪದ್ದಳನಾನುಕನೇರು | |
| ಗೊಡಗುದಾಸರು | ಚನ್ನಗೋರು | ರಂಗಸೇಟಿ | ಬಂಗಾರು |
| ಬಲ್ಲನೋಡು | ----------- | ----------- | ಕಂಪಳ |
| ಗೂನೋಡು | ----------- | ----------- | |
| ಕಾಮನೋಡು | ಕರಿನೋಡು | ಗೋಸೇಲಡು | |
| ಪಡ್ಡರು | ಯರಮಂಚಜ್ಜನೋಡು | ದಡ್ಡಿದಾಸರಿ, ಕುಂಟ್ರೀಲು | |
| ಬೋಸುರ್ಲು | ಮನ್ನುಲು | ಎತ್ತಿನವರು | |
| ಓಬನಾಯಕರು | ಕುರುಬುಲು | ಉರಬಾಲಯ್ಯ | |
| ಚೆನ್ನನಾಯ್ಕ | ಮುಮ್ಮಡ್ಲು | ಒಕ್ಲರು | |
| ಕುಂಡ್ರಲು | ಗೌಡವುಲು | | |
| ಕೋಸಲವರು | ಗಜ್ಜುಡ್ಲು | ಭಾನೊರು | |
| ಬೋನಹಳ್ಳಿಯೂರು | ಬಡಸಲೋರು | ರಾಯಬೋರು | |

೧. ಸೂರ್ಯವಂಶದ ಬೆಡಗು (ಮಲ್ಲಿನಾಯಕ)

| | | |
|---|---|---|
| ಈಶ್ವರನೋರು | ಓಬನಾಯಕನೋರು | ಚಿನ್ನಕಾಟನೋರು |
| ಪೇಯಿಲೋರು | ಮೇಸಲೋರು | ಎನುಮುಲೋರು |
| ಕಾಟಮಲ್ಲನಾಯಕನೋರು | ಪೆದ್ದನಾಯಕನೋರು | ಬಂಗಾರುದೇವರು |

ವಡೇಲಾರು (ಇದರಲ್ಲಿ ಯರಮಂಚಿನಾಯಕ ಬೆಡಗುಗಳಿವೆ)

| | | |
|---|---|---|
| ಅಚ್ಚಪಲ್ಲೋರು | ನಲಗೇತಿ | ಯರಗಾದ್ಲವರು |
| ಕರಿನೋರು | ಯರಗೋತಿ | ವಡೇಲರು |

೨. ಚಂದ್ರವಂಶದ ಬೆಡಗು (ಮಂದವಾರು)

| | | | |
|---|---|---|---|
| ಕಾಮಗೇತಿ ಬುಲ್ಲುಡ್ಲು | ಸಾಕೆಲರು | ಗಾದಪಾಲೋರು | ಮಾಸಲೋರು |

ಇತ್ಯಾದಿ ಬೆಡಗುಗಳು ಕಂಡುಬರುತ್ತವೆ.

ಕೃಪೆ : ಮಧ್ಯಕಾಲೀನ ಕನ್ನಡ ಕಾವ್ಯಗಳಲ್ಲಿ ನಿರೂಪಿತವಾಗಿರುವ ಬೇಟೆ ಮತ್ತು ಬೇಡರ ಸಂದರ್ಭಗಳು : ಒಂದು ಚಾರಿತ್ರಿಕ ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ (ಅಪ್ರಕಟಿತ), ೨೦೦೦ ಪು. ೨೭೧-೨೭೩)

## ಅನುಬಂಧ - ೩

### ವಕ್ತೃಗಳ ವಿವರ

| | | |
|---|---|---|
| ೧. ಓಬಣ್ಣ | ೪೨ ವರ್ಷ | ಉರ್ಥಾಳು |
| ೨. ಗಂಗಣ್ಣ | ೫೦ ವರ್ಷ | ರಾಮಸಾಗರ |
| ೩. ಗಂಗಮ್ಮ | ೪೮ ವರ್ಷ | ಉರ್ಥಾಳು |
| ೪. ಗಂಗಾಧರ | ೧೫ ವರ್ಷ | ಗೌರಸಮುದ್ರ |
| ೫. ತಿಪ್ಪೇಸ್ವಾಮಿ | ೫೨ ವರ್ಷ | ಬೊಮ್ಮದೇವರಹಳ್ಳಿ |
| ೬. ದೇವಮ್ಮ | ೬೦ ವರ್ಷ | ಕೊಮ್ಮನಪಟ್ಟಿ |
| ೭. ದೇವರಾಜ | ೨೭ ವರ್ಷ | ದಾಸರಮುತ್ತೇನಹಳ್ಳಿ |
| ೮. ಧನಂಜಯ್ಯ | ೨೪ ವರ್ಷ | ಕೋನಸಾಗರ |
| ೯. ಸಣ್ಣಪಾಪಯ್ಯ | ೩೦ ವರ್ಷ | ದೇವರಹಟ್ಟಿ |
| ೧೦. ಭೀಮಡು | ೭೦ ವರ್ಷ | ವೇಲೂರು |
| ೧೧. ಬೊಮ್ಮಯ್ಯ | ೫೦ ವರ್ಷ | ಕೋನಸಾಗರ |
| ೧೨. ಬೊಮ್ಮಲಿಂಗಪ್ಪ | ೪೦ ವರ್ಷ | ಕೋನಾಪುರ |
| ೧೩. ಮಾರಕ್ಕ | ೪೫ ವರ್ಷ | ಉರ್ಥಾಳು |
| ೧೪. ಮಾರಯ್ಯ | ೭೦ ವರ್ಷ | ಮೇಗಳಕಣಿವೆ |
| ೧೫. ಮಲಿಯಪ್ಪ | ೬೮ ವರ್ಷ | ಹುಚ್ಚಂಗಿದುರ್ಗ |
| ೧೬. ಮಲ್ಲಯ್ಯ | ೩೮ ವರ್ಷ | ಸೂರನಹಳ್ಳಿ, ರಾಯಪುರ |
| ೧೭. ಯಶೋದಮ್ಮ | ೩೨ ವರ್ಷ | ಕೊಮ್ಮನಪಟ್ಟಿ |
| ೧೮. ರಾಮಾಂಜನೇಯ | ೪೦ ವರ್ಷ | ಉರ್ಥಾಳು |
| ೧೯. ಸಿದ್ದಯ್ಯ | ೭೫ ವರ್ಷ | ಹುಚ್ಚಂಗಿದುರ್ಗ |
| ೨೦. ಹನುಮಯ್ಯ | ೬೪ ವರ್ಷ | ಉರ್ಥಾಳು |

# ಪರಾಮರ್ಶನ ಗ್ರಂಥಗಳು


**ಕನ್ನಡ ಗ್ರಂಥಗಳು**

೧. ಅಂಗಡಿ ಎಸ್.ಎಸ್, ಸಂಬಂಧವಾಚಕಗಳು ಮತ್ತು ಸಂಬೋಧನಾ ರೂಪಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೨. ಅಂಗಡಿ ಎಸ್.ಎಸ್, ಶೋಧನೆ, ಪಾರ್ವತಮ್ಮ ಪ್ರಕಾಶನ, ಬೆಳಗಾವಿ, ೧೯೯೮

೩. ಅಂಗಡಿ ಎಸ್.ಎಸ್, ಕನ್ನಡ ಕ್ರಿಯಾರೂಪಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೪. ಈಶ್ವರಪ್ಪ ಎಂ.ಜಿ, ಮ್ಯಾಸಬೇಡರು, ಐ.ಬಿ.ಹೆಚ್.ಪ್ರಕಾಶನ, ಬೆಂಗಳೂರು, ೧೯೮೭

೫. ಓಂಪ್ರಕಾಶ ನಾಯಕ ಬಿ, ಬಳ್ಳಾರಿ ವ್ಯವಹಾರಿಕ ಕನ್ನಡದ ಉಚ್ಚಾರಣೆ ಮತ್ತು ಧ್ವನಿನಿಯಮಗಳು (ಅಪ್ರಕಟಿತ), ಎಂ.ಫಿಲ್ . ಸಂಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೬. ಕರಿಶಟ್ಟಿ ರುದ್ರಪ್ಪ, ಮ್ಯಾಸನಾಯಕರ ಒಂದು ಜನಾಂಗಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫

೭. ಕೃಷ್ಣಪರಮೇಶ್ವರ ಭಟ್ಟ, ಕನ್ನಡ ತೆಲುಗು ದ್ವಿಭಾಷಿಕತೆಯ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫

೮. ಕೃಷ್ಣಮೂರ್ತಿ ಹನೂರು, ಮ್ಯಾಸಬೇಡರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೯. ಖಂಡೋಬಾ ಪಿ.ಕೆ. ಕರ್ನಾಟಕದ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ, ದಿ.ತೇಜಸಿಂಗ ರಾಠೋಡ ಮೆಮೋರಿಯಲ್ ಟ್ರಸ್ಟ್, ಗುಲಬರ್ಗಾ, ೧೯೯೧

೧೦. ಗಿರಿಜಾ ಟಿ. ಚಿತ್ರದುರ್ಗ ಜಿಲ್ಲಾದರ್ಶನಿ, ರೇಖಾ ಪ್ರಕಾಶನ, ದಾವಣಗೆರೆ, ೧೯೯೧

೧೧. ಚಿದಾನಂದಮೂರ್ತಿ, ವಾಗರ್ಥ, ಬಾಪ್ಕೊ ಬೆಂಗಳೂರು, ೧೯೮೧

೧೨. ಚಿದಾನಂದಮೂರ್ತಿ, ಭಾಷಾ ವಿಜ್ಞಾನದ ಮೂಲ ತತ್ವಗಳು, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೧೯೯೫

೧೩. ಬಿಳಿಗಿರಿ ಎಚ್.ಎಸ್. ವರಸೆಗಳು, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೯೫

೧೪. ಭಾಗ್ಯಲಕ್ಷ್ಮಿ ಎಂ, ಬಳ್ಳಾರಿ ಪರಿಸರದ ಕನ್ನಡ ಮತ್ತು ತೆಲುಗು ದ್ವಿಭಾಷಿಕತೆ : ಸಮಾಜೋಭಾಷಿಕ ಅಧ್ಯಯನ (ಅಪ್ರಕಟಿತ), ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೧೫. ಭೀಮರೆಡ್ಡಿ ಕೆ.ಎನ್, ಮೊಳಕಾಲ್ಮೂರು ತಾಲೂಕು ದರ್ಶನ, ಐ.ಬಿ.ಹೆಚ್.ಪ್ರಕಾಶನ, ಬೆಂಗಳೂರು, ೧೯೮೭

೧೬. ದೊಣೆಹಳ್ಳಿ ರಾಮಮೂರ್ತಿ (ಸಂ). ಗಡಿನಾಡು (ಮೊಳಕಾಲ್ಮೂರು ಗಡಿನಾಡು ಉತ್ಸವ ನೆನಪಿನ ಸಂಚಿಕೆ), ವಿಚಾರ ಪ್ರಕಾಶನ, ದಾವಣಗೆರೆ, ೨೦೦೨

೧೭. ನಾರಾಯಣ ಕೆ.ವಿ. (ಸಂ), ಭಾಷಾ ವಿಶ್ವಕೋಶ - ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೧೮. ನಾರಾಯಣ ಕೆ.ವಿ. (ಸಂ), ನಮ್ಮ ಕನ್ನಡ ಹೊನ್ನ ಸಂಚಿಕೆ, ಕನ್ನಡ ಭಾಷಾಭಿವೃದ್ಧಿ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೧೯. ನಾರಾಯಣ ಕೆ.ವಿ, ದ್ವಿಭಾಷಿಕತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮

೨೦. ನಾರಾಯಣ ಕೆ.ವಿ. (ಸಂ), ಕನ್ನಡ ಭಾಷಾಭಿವೃದ್ಧಿ ಸಾಧನೆ ಮತ್ತು ಮುನ್ನೋಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೨೧. ನಾರಾಯಣ ಕೆ.ವಿ, ಭಾಷೆಯ ಸುತ್ತಮುತ್ತ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೯೮

೨೨. ಮಹಾದೇವಯ್ಯ ಪಿ, ಸಾಮಾಜಿಕ ಉಪಭಾಷೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೨೩. ಮೀರಸಾಬಿಹಳ್ಳಿ ಶಿವಣ್ಣ, ಗೊಲ್ಲಕಡಗ, ಸಿ.ಬಿ.ಜಿ.ಪಬ್ಲಿಕೇಷನ್, ಬೆಂಗಳೂರು, ೧೯೯೯

೨೪. ಮೈತ್ರಿ ಕೆ.ಎಂ, ಬುಡಕಟ್ಟು ಕುಲಕಸುಬುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೨೫. ರಾಮಮೂರ್ತಿ ಜೆ.ಆರ್, ಮೊಳಗುವಕಲ್ಲು, ಸ್ಮರಣ ಸಂಚಿಕೆ ಸ್ವಾಗತ ಸಮಿತಿ (ಚಿತ್ರದುರ್ಗ ೭ನೇ ಕನ್ನಡ ಸಾಹಿತ್ಯ ಸಮ್ಮೇಳನ), ಮೊಳಕಾಲ್ಮೂರು, ೧೯೯೮

೨೬. ಲಕ್ಷ್ಮಣ್ ತೆಲಗಾವಿ, ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಹುಲ್ಲೂರು ಶ್ರೀನಿವಾಸ ಜೋಯಿಸ ಗ್ರಂಥ ಪ್ರಕಟಣಾ ಸಮಿತಿ, ಚಿತ್ರದುರ್ಗ, ೧೯೭೬

೨೭. ಲಕ್ಷ್ಮಣ್ ತೆಲಗಾವಿ, ಹರಿತಿಸಿರಿ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೧೯೮೭

೨೮. ಲೋಹಾಪುರ ರಂ.ಶಾ, ಹಳಗನ್ನಡ ಮತ್ತು ಮರಾಠಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪

೨೯. ವೆಂಕಟಸುಬ್ಬಯ್ಯ ಜಿ, ಎರವಲು ಪದಕೋಶ, ನವಕರ್ನಾಟಕ ಪಬ್ಲಿಕೇಷನ್ಸ್ , ಬೆಂಗಳೂರು, ೧೯೯೮

೩೦. ವೆಂಕಟೇಶ್ ಇಂದ್ವಾಡಿ, ನೀಲಗಾರರು ಸಾಂಸ್ಕೃತಿಕ ಪದಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೩೧. ವಿರೂಪಾಕ್ಷಿ, ಮಧ್ಯಕಾಲೀನ ಕನ್ನಡ ಕಾವ್ಯಗಳಲ್ಲಿ ನಿರೂಪಿತವಾಗಿರುವ ಬೇಟೆ ಮತ್ತು ಬೇಡರ ಸಂದರ್ಭಗಳು : ಒಂದು ಚಾರಿತ್ರಿಕ ಅಧ್ಯಯನ (ಅಪ್ರಕಟಿತ), ಪಿಎಚ್.ಡಿ. ಮಹಾಪ್ರಬಂಧ. ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೩೨. ವೀಣಾ ಎಂ.ಪಿ. ಮನೆ, ಸಮಾಜ ಮತ್ತು ಸಂಸ್ಕೃತಿ, ನಲೆಮನೆ ಪ್ರಕಾಶನ, ಬೆಂಗಳೂರು, ೨೦೦೦

೩೩. ಶಂಕರ್‌ಭಟ್ ಡಿ.ಎನ್, ಇಂದಿನ ಕನ್ನಡ ರಚನೆ ಮತ್ತು ಬಳಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫

೩೪. ಸಂಗಮೇಶ ಸವದತ್ತಿ ಮಠ, ಭಾಷಾಲೇಖ, ರೂಪರಶ್ಮಿ ಪ್ರಕಾಶನ, ಗುಲಬರ್ಗಾ, ೧೯೯೯

೩೫. ಸಂಗಮೇಶ ಸವದತ್ತಿ ಮಠ, ಕನ್ನಡ ಭಾಷಾ ವ್ಯಾಸಂಗ, ರೂಪರಶ್ಮಿ ಪ್ರಕಾಶನ, ಗುಲಬರ್ಗಾ, ೧೯೭೯

೩೬. ಸುಂಕಾಪುರ ಎಂ.ಎಸ್. (ಸಂ), ಕರ್ನಾಟಕ ಭಾರತಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬

**ನಿಯತಕಾಲಿಕೆಗಳು**

೧. ನಮ್ಮ ಕನ್ನಡ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಕನ್ನಡ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. ಮಹಿಳಾ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪. ದ್ರಾವಿಡ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಇಂಗ್ಲಿಶ್ ಗ್ರಂಥಗಳು**

1. Fisherman J, 1972, Advances in the Sociology of Language, Mounton Press
2. Janet Halmes, 1993. An Introduction to Sociolinguistic, Longman
3. John J. Gumperz and Bell Hymes (Ed), 1972, Directions in Sociolinguistics, Basil Bluckwell, USA
4. John J. Gumperz (Ed), 1982. Language and Social Identity, Cambridge University Press
5. Johnua A. Fisherman, 1977, Readings in the Sociology Language, Mounton Hague
6. Ralph Fassold, 1940, Sociolinguistics of Language. Bluckwell Publishers 108 Cowley Road, Oxford, ox4, IJF, UK
7. Satyan. B.N (Ed), 1967, Chitradurga District Gazetteer, Govt. of Karnataka, Bangalore

